ಬೆಲೆ: ಎರಡು ಆಣೆ

# ಕರ್ಮವೀರ

ವರ್ಗಣಿ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೪-೦
೬ ತಿಂಗಳಿಗೆ ,, ೩-೪-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ ತರಿಸಿಕೊಂಡಲ್ಲಿ ೫ ಆಣೆ ಹೆಚ್ಚಿಗೆ ಬೀಳುವದು.

KARMAVEER
WEEKLY
HUBLI
★
OCT. 14
1946

ಸಂಪಾದಕರು :
ಹ. ರಾ. ಪುರೋಹಿತ, ಎಂ. ಎ.

ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ

Editor : H. R. Purohit, M. A.

ಸಂಪುಟ ೧೮ ] ಹುಬ್ಬಳ್ಳಿ ಸೋಮವಾರ ತಾರೀಖು ೧೪ — ೧೦ — ೧೯೪೬ [ ಸಂಚಿಕೆ ೨೬


# ಕಾಂಗ್ರೆಸ್ ಸಂಘಟನೆಯಲ್ಲಿಯ ಕೆಲ ದೋಷಗಳು

## 'ಸತ್ಯ ಅಹಿಂಸೆಗಳು' ಬರಿ ಬಾಯ್ಮಾತಿನಲ್ಲೇ ಉಳಿದಿವೆ
## ಕಪಟವನ್ನು ತೊಡೆದುಹಾಕಲು ಗಾಂಧೀಜಿಯ ಉಪದೇಶ

[ ಹರಿಜನದಿಂದ ]

ಮೊನ್ನಿನ ಅ. ಭಾ. ಕಾಂಗ್ರೆಸ್ ಸಮಿತಿ ಸಭೆಯ ಅಧಿವೇಶನದ ಪ್ರಯೋಜನ ಪಡೆದು ಕಾಂಗ್ರೆಸ್ಸಿನ ಕಾರ್ಯದರ್ಶಿಗಳು ವಿವಿಧ ಪ್ರಾಂತಿಕ ಕಾಂಗ್ರೆಸ್ ಸಮಿತಿಗಳ ಅಧ್ಯಕ್ಷ ಕಾರ್ಯದರ್ಶಿಗಳ ಕೂಟವೊಂದು ಗಾಂಧೀಜಿಯನ್ನು ಕಾಣುವಂತೆ ಏರ್ಪಡಿಸಿದ್ದರು. ಈ ಕೂಟ ದಿಲ್ಲಿಯ ಡಿ. ಎ. ವಿ. ಸ್ಕೂಲಿನ ಭವನದಲ್ಲಿ ಸೇರಿತು. ಗಾಂಧೀಜಿ ಹಿಂದುಸ್ತಾನಿಯಲ್ಲಿ ಮಾತನಾಡಿದರು. ಭಾಷಣ ಮಾಡುದ ಬದಲು ಅವರು ಪ್ರಶ್ನೆ ಕೇಳಲು ಅವಕಾಶವಿತ್ತರು. ಅವುಗಳಲ್ಲಿ ಪ್ರಾಮುಖ್ಯವಾದ ಪ್ರಶ್ನೋತ್ತರಗಳನ್ನು ಈ ಕೆಳಗೆ ಕೊಡಲಾಗಿದೆ.

ಪ್ರಶ್ನೆ:— ನಮ್ಮ ಅಯ್ಕೆಗಳಲ್ಲಿ ಕಚ್ಚಾಟ ಭ್ರಷ್ಟಾಚಾರಗಳು ನಿತ್ಯದ ಮಾತಾಗಿಬಿಟ್ಟವೆ. ಅಯ್ಕೆಗಳನ್ನು ಕುರಿತು ಕಾಂಗ್ರೆಸ್ಸಿಗರು ಎಂತು ನಡೆದುಕೊಳ್ಳಬೇಕು?

ಉತ್ತರ:— ನಾವು ದೇಶಸೇವಕರಾಗುವ ಬದಲು ಮುಂದಾಳ್ತನಕ್ಕೆ ಕರುಬುತ್ತೇವೆಂದು ನಿಮ್ಮ ಮಾತಿನಿಂದ ಸ್ಪಷ್ಟವಾಗುತ್ತದೆ. ಸೇವೆಯೇ ಧ್ಯೇಯವಾಗಿರುವಲ್ಲಿ ಕಚ್ಚಾಟಗಳಿಗೆ ಎಡೆಯೇ ಇರಲಾರದು. ಕೆಲವರು ಮಾತ್ರ ಮುಂದಾಳುಗಳಾಗಬಲ್ಲರೆಂದು ಕಾಂಗ್ರೆಸ್ಸಿಗರು ಮನಗಾಣಬೇಕು. ಆದ್ದರಿಂದ ಎಲ್ಲ ಕಾಂಗ್ರೆಸ್ಸಿಗರು ತಮ್ಮ ಕಣ್ಮುಂದೆ ಇಟ್ಟುಕೊಳ್ಳಬೇಕಾದ ಗುರಿ, ತಾವು ರಾಷ್ಟ್ರಸೇವೆಯಲ್ಲಿ ಸಿದ್ಧಹಸ್ತರಾಗಬೇಕೆಂಬುದು. ಮುಂದಾಳುಗಳಿಂದ ತುಂಬಿಹೋಗಿರುವ ಸಂಸ್ಥೆಗೆ ಕೇಡುಗಾಲ ಬಂದಿದೆಯೆಂದು ತಿಳಿಯಬೇಕು. ಉದಾಹರಣೆಗಾಗಿ, ಪ್ರತಿಯೊಬ್ಬ ಖುದಾಯಿ ಖಿದ್ಮತಗಾರನೂ ಅದರ ನಾಯಕನಾಗಲು ಹಾತೊರೆದರೆ ಬಾದಶಾ ಖಾನರ ಜೀವನ ನರಕಸದೃಶವಾದೀತು ಮಾತ್ರವಲ್ಲ, ಖುದಾಯಿ ಖಿದ್ಮತಗಾರ ಸಂಸ್ಥೆಯೇ ಒಡೆದುಹೋದೀತು.

ಕಾಂಗ್ರೆಸ್ಸಿಗರು ತಾವು ಕೈಕೊಂಡ ದೀಕ್ಷೆಯನ್ನು ಸರಿಯಾಗಿ ಪಾಲಿಸಿದರೆ, ಅಂದರೆ ಕಾಂಗ್ರೆಸ್ ಘಟನೆಯಲ್ಲಿ "ಶಾಂತ ಮತ್ತು ನ್ಯಾಯ್ಯವಾದ ಉಪಾಯಗಳಿಂದ" ಎಂಬ ಶಬ್ದಗಳಲ್ಲಿ ಗರ್ಭಿತವಾದಂತೆ ಸತ್ಯಸಂಧ ಮತ್ತು ಅಹಿಂಸಾತ್ಮಕ ಸಾಧನಗಳಿಂದ ಸ್ವರಾಜ್ಯವನ್ನು ಗಳಿಸುವ ಧ್ಯೇಯವನ್ನು ಆಚರಿಸಿದರೆ, ಆಗ ಕಚ್ಚಾಟಗಳಾಗಲಿ ಭ್ರಷ್ಟಾಚಾರಗಳಾಗಲಿ-ಇರಲರಿಯವು. ಅಯ್ಕೆಗಳಲ್ಲಿ ಕಚ್ಚಾಟ ಭ್ರಷ್ಟಾಚಾರಗಳಿವೆಯೆಂದ ಮೇಲೆ "'ಶಾಂತ ಮತ್ತು ನ್ಯಾಯ್ಯ' ಉಪಾಯಗಳಿಂದ ಸ್ವರಾಜ್ಯವನ್ನು ಗಳಿಸುವ" ಕಾಂಗ್ರೆಸ್ಸಿನ ಧೋರಣೆಯ ಪಾಲನೆಗಿಂತ ಉಲ್ಲಂಘನೆಯೆ ಹೆಚ್ಚು ರೂಢವಾಗಿದೆಯೆಂದು ಹೇಳಲಡ್ಡಿಯಿಲ್ಲ. ಆದುದರಿಂದ ಬರಲಿರುವ ಹೊಸ ಘಟನೆಯಲ್ಲಿ ಈ ಶಬ್ದಗಳನ್ನು ಬಿಟ್ಟುಬಿಡಬೇಕೆಂದು ಸೂಚಿಸಿದ್ದೇನೆ. ಹೊಸ ಘಟನೆ ಆಚರಣೆಗೆ ಬರುವ ವರೆಗೆ ಸದ್ಯಕ್ಕೆ ಅಯ್ಕೆಗಳನ್ನೇ ತೆಗೆದುಹಾಕಿ ಎಲ್ಲ ಕಾಂಗ್ರೆಸ್ಸಿಗರೂ ಸಕ್ರಿಯ ಕಾರ್ಯಕರ್ತರಾಗುವಂತೆ ನಿರ್ಬಂಧ ಹಾಕಬೇಕೆಂದು ಸೂಚಿಸಿದ್ದೇನೆ. ಹೀಗೆ ಮಾಡಿದರೆ ನಮ್ಮ ತೊಡಕು ತೊಂದರೆಗಳೆಲ್ಲ ಪರಿಹಾರಗೊಳ್ಳಬಹುದು.

ಪ್ರಶ್ನೆ:— ಅಯ್ಕೆಗಳಲ್ಲಿ ಅಲ್ಪಸಂಖ್ಯಾಕ ಪ್ರತಿನಿಧಿಗಳು ಆರಿಸಿ ಬಂದಿರುವದು ಬಹಳ ವಿರಳ. ಇದಕ್ಕೆ ನೀವೇನು ಉಪಾಯ ಹೇಳುವಿರಿ?

ಉತ್ತರ:— ಅಲ್ಪಸಂಖಾಕರು ಅಲ್ಪಸಂಖ್ಯಾಕರೇ ಇರುವದರಿಂದ ಕಾಂಗ್ರೆಸ್ ಸಂಸ್ಥೆಯಲ್ಲಿ ಅವರ ಪ್ರಾತಿನಿಧ್ಯ ಕಡಿಮೆಯಾಗುವದು ಸ್ವಾಭಾವಿಕವೆ. ಅವರಿಗೆ ಇದು ಸಂತೋಷವಿಲ್ಲದಿದ್ದರೆ ನನ್ನಂತೆ ಅವರು ಕಾಂಗ್ರೆಸ್ಸಿಗರಾಗಿ ಉಳಿದೂ ಕಾಂಗ್ರೆಸ್ಸಿನಿಂದ ಹೊರಗೆ ನಿಲ್ಲಬಹುದು. ಕಾಂಗ್ರೆಸ್ಸಿನ ನಾಲ್ಕಾಣೆ ಸದಸ್ಯ ಕೂಡ ಆಗದಿರುವ ಮೂಲಕ ನನ್ನ ಕಾಂಗ್ರೆಸ್ಸಿಗತನ ಹೆಚ್ಚಿದೆ ಹೊರತು ಕಡಿಮೆಯಾಗಿಲ್ಲವೆಂದು ನನ್ನ ವಾದ. ಫೈಜಪೂರ ಕಾಂಗ್ರೆಸ್ಸಿನಲ್ಲಿ ಒಂದು ಕೂಟದಲ್ಲಿ ಈ ಪ್ರಶ್ನೆಯನ್ನು ಶ್ರೀಮತಿ ಅನಸೂಯಾಬಾಯಿ ಕಾಳೆಯವರು ಎತ್ತಿದರು. ಆ ಕೂಟದಲ್ಲಿ ನಾನೂ ಇದ್ದೆ. ಕೇಳಿದಾಗ ನಾಲ್ಕಾಣೆ ಸದಸ್ಯರಾಗಿದ್ದವರಸಂಖ್ಯೆ ತೀರ ಸಣ್ಣದಾಗಿದ್ದುದು ಕಂಡುಬಂತು. ಕೂಟದಲ್ಲಿ ಕಾಂಗ್ರೆಸ್ಸಿನ ನಾಲ್ಕಾಣೆ ಸದಸ್ಯರಲ್ಲದವರಾರಾರೆಂದು ಕೇಳಿದರೆ ಕೈಗಳ ಒಂದು ಅಡವಿಯೇ ಎದ್ದು ಬಂತು. ಇವರೀಗ ಯಾವಪ್ರತಿಫಲವನ್ನೂ ಬಯಸದೆ ಕೇವಲ ಕಾಂಗ್ರೆಸ್ಸಿನ ಸೇವೆ ಮಾಡಲು ಆತುರರಾದ ನಿಜವಾದ ಕಾಂಗ್ರೆಸ್ಸಿಗರು. ಸಂಭಾವಿತ ಕಾಂಗ್ರೆಸ್ಸಿಗನಾದವನು ತಾನು ಪೂರ್ಣ ಕಾಂಗ್ರೆಸ್ಸಿಗನಾಗಲಿಚ್ಛಿಸುವನಲ್ಲದೆ ಅದನ್ನು ಕೈವಶ ಮಾಡಿಕೊಳ್ಳಲು ಇಲ್ಲವೆ ಅದರಲ್ಲಿ ಕೈವಾಡ ನಡೆಸಲು ಹಾರೈಸಲಾರನು. ಎಲ್ಲರೂ ಸರಿಯಾಗಿಯೆ ನಡೆದುಕೊಂಡರೆ ಅಲ್ಪಸಂಖ್ಯಾಕ ಬಹುಸಂಖ್ಯಾಕರ ಮಾತೇ ಹುಟ್ಟದು. ಕಾಂಗ್ರೆಸ್ಸನ್ನು "ಕೈವಶ ಪಡಿಸಿಕೊಳ್ಳಲು" ಪ್ರಯತ್ನಿಸುವದೆಂದರೆ ಅದನ್ನು ಕೊಲ್ಲುವದೆಂದೇ ಅರ್ಥ. ಉಂಡ ಮನೆಗೆ ಎರಡು ಬಯಸದ ಕಾಂಗ್ರೆಸ್ಸಿಗನು ಹೀಗೆ ಕೊಲೆಗೆ ಕಾರಣನಾಗುವ ಬದಲು ತಾನೇ ಸಾಯುವದು ಲೇಸೆಂದು ಬಗೆದಾನು.

ಪ್ರಶ್ನೆ:— ನಡುಗಾಲ ಸರಕಾರ ಆಹಾರ ಧಾನ್ಯಗಳ ಬೆಲೆಯನ್ನು ತಗ್ಗಿಸಿಡುವ ಧೋರಣೆಯನ್ನು ಅನುಸರಿಸಿದೆ. ಇದು ಆಹಾರಧಾನ್ಯದ ಉತ್ಪಾದನೆ. ವಿಷಮವಾಗಲಿಕ್ಕಿಲ್ಲವೆ?

ಉತ್ತರ:— ಆಹಾರ ಧಾನ್ಯಗಳ ಬೆಲೆಗಳನ್ನು ಇನ್ನಷ್ಟು ಇಳಿಸಬೇಕೆಂಬವನು ನಾನು. ನಾನೂ ಒಬ್ಬ ರೈತನೆಂದು ಹೇಳಿಕೊಳ್ಳುತ್ತೇನೆ. ಬಳಸುವವನು ಕೊಡುವ ಬೆಲೆಯಲ್ಲಿ ಬೆಳೆಸುವವನ ಕೈಸೇರುವ ಅಂಶ ಅಲ್ಪವೆಂದು ನನಗೆ ಗೊತ್ತುಂಟು. ರಂಟೆ ಹೊಡೆಯುವವನಿಗೆ ತನ್ನ ಹುಟ್ಟುವಳಿಯ ಪೂರ್ಣ ಬೆಲೆ ಸಿಗುವಂತೆ ನೋಡಿಕೊಳ್ಳಬೇಕಾದುದು ನಡುಗಾಲ ಸರಕಾರದ ಕರ್ತವ್ಯ. ಬಳಸುವವನು ಕೊಡುವ ಕಾಸು ಕಾಸೂ ರೈತನ ಕೈಸೇರುವಂತಾಗಬೇಕು ಇಲ್ಲವೇ, ಅದು ಹೊರಬಿದ್ದು ಹೋಗಬೇಕು. ಆಹಾರ ಬೆಳೆಸುವವನಿಗೆ ಕತ್ತರಿ ಹಾಕಿ ಬಳಸುವವನಿಗೆ ಅಗ್ಗದ ಧಾನ್ಯವನ್ನು ಒದಗಿಸಬಯಸುವ ಪಾಪಕ್ಕೆ ನಡುಗಾಲ ಸರಕಾರ ಎಂದೂ ಕೈಹಾಕದು. ರೈತನಿಗೊದಗಿದ ಸಂಕಟ ಬೆಲೆಕಡಿಮೆಯಾದುದಲ್ಲ ಬದಲಿಗೆ ನಡುವೆ ನಿಂತ ದಲ್ಲಾಳನದು.

ಖಾದಿ ಉತ್ಪಾದನೆಯಲ್ಲಿ ಕೂಡ ನೂಲುವವರಿಗೆ ದಿನಕ್ಕೆಂಟಾಣೆಯ ಕೂಲಿಯನ್ನು ನಾನು ಗುರಿಯಾಗಿಟ್ಟುಕೊಂಡಿದ್ದೆ. ಖಾದಿ ತುಟ್ಟಿಯಾದರೆ ಅದರ ಉತ್ಪಾದನೆಯೇ ಹಾಳಾಗಿ ಹೋಗಬಹುದೆಂಬ ಎಚ್ಚರಿಕೆಯನ್ನೂ ಲೆಕ್ಕಿಸದೆ ನಾವು ನಾಲ್ಕಾಣೆಯ ಮಟ್ಟವನ್ನು ಮುಟ್ಟಿದ್ದೆವು. ಉತ್ಪಾದಕನ ಬಗೆಗಿರುವ ನನ್ನ ದೃಷ್ಟಿಗೆ ಇದೇ ದೃಷ್ಟಾಂತ, ದಲ್ಲಾಳನನ್ನು ಇಲ್ಲದಂತೆ ಮಾಡಿಬಿಡಬೇಕು. ಇಂದು ರೈತನನ್ನು ಹೀರುತ್ತಿರುವವನೆಂದರೆ ಅವನು. ಇಲ್ಲದಿದ್ದರೆ ರೈತನು ಉಪವಾಸ ಬೀಳಬೇಕಾದ ಕಾರಣವೇ ಇರಲಿಲ್ಲ. ಅಂತೆಯೇ ಯಾವ ರೈತನು ಕಳ್ಳ ಸಂತೆಯಲ್ಲಿ ಲಾಭ ಹೊಡೆಯುವವನೋ ಅವನು ತನ್ನ ವೃತ್ತಿಗೆ ಮಸಿ ಬಳಿಯುತ್ತಾನೆ. ಅವನು ಜಮೀನದಾರನಿಗಿಂತ ಕಡಿಮೆಯ ಶೋಷಕನಲ್ಲ.

ಪ್ರಶ್ನೆ:— ಕಾಂಗ್ರೆಸ್ಸಿನಲ್ಲಿ ಒಳಪಕ್ಷಗಳು ಬೆಳೆದು ಕಾಂಗ್ರೆಸ್ ಸಂಘಟನೆಗೆ ಬಾಧಕ ತರುತಿವೆ. ಇದಕ್ಕೇನು ಉಪಾಯ ?

ಉತ್ತರ:— ಕಾಂಗ್ರೆಸ್ಸಿನಲ್ಲಿ ಒಂದೇ ಪಕ್ಷವಿರಬೇಕು; ಅದೆಂದರೆ ಕಾಂಗ್ರೆಸ್ಸಿಗರದು; ಬೇರೆ ಕೂಡದು. ಇದರಿಂದ ಕಾಂಗ್ರೆಸ್ಸಿನಲ್ಲಿ ಬೇರೆ ಬೇರೆ ಅಭಿಪ್ರಾಯಗಳನ್ನು ಇಟ್ಟುಕೊಂಡ ವ್ಯಕ್ತಿಗಳಿಗೂ ಗುಂಪುಗಳಿಗೂ ಎಡೆಯಿಲ್ಲವೆಂದಾಗಲಿಲ್ಲ. ನಿರ್ಜೀವ ಐಕ್ಯದಲ್ಲಿ ನನಗೆ ನಂಬಿಕೆಯಿಲ್ಲ. "ಎಲ್ಲ ಮನುಷ್ಯರೂ ಹುಟ್ಟಾ ಸಮಾನರು ಮತ್ತು ಸ್ವತಂತ್ರರು" ಎಂಬುದು ಅಕ್ಷರಶಃ ನಿಸರ್ಗನಿಯಮವೆಂದು ಹೇಳಬರುವದಿಲ್ಲ. ಉದಾಹರಣೆಗಾಗಿ, ಎಲ್ಲ ಮನುಷ್ಯರೂ ಬುದ್ಧಿಶಕ್ತಿಯಲ್ಲಿ ಸಮಾನರಾಗಿ ಹುಟ್ಟಿರುವದಿಲ್ಲ. ಆದರೆ ಬುದ್ಧಿಶಕ್ತಿಯಲ್ಲಿ ಮಿಗಿಲಾದವರು ಅದನ್ನು ಸ್ವಾರ್ಥಸಾಧನೆಗಾಗಿ ಉಪಯೋಗಿಸದೆ, ಈ ವಿಷಯದಲ್ಲಿ ತಮಗಿಂತ ಕಡಿಮೆ ಭಾಗ್ಯಶಾಲಿಗಳಾಗಿರುವವರ ಸೇವೆಗೆ ವಿನಿಯೋಗಿಸಿದರೆ ತೀರಿತು, ಸಮಾನತೆಯ ನೀತಿಯನ್ನು ಪಾಲಿಸಿದಂತೆಯೆ. ಇಂದು ಕಾಂಗ್ರೆಸಿನಲ್ಲಿ ಎಲ್ಲ ಬಗೆಯ ಜನರೂ ಇದ್ದಾರೆ. ಇದೇ ಕಾರಣಕ್ಕಾಗಿ ನಾನು ಕಾಂಗ್ರೆಸ್ ಧ್ಯೇಯದಿಂದ "ಶಾಂತ ಮತ್ತು ನ್ಯಾಯ್ಯ" ಎಂಬ ಶಬ್ದಗಳನ್ನು ತೆಗೆದು ಹಾಕಬೇಕೆನ್ನುತ್ತೇನೆ. ಇದರಿಂದ ಕಾಂಗ್ರೆಸ್ಸಿಗರು ಸತ್ಯ ಅಹಿಂಸೆಗಳನ್ನು ತ್ಯಜಿಸಿಬಿಡಬೇಕೆಂದು ಅರ್ಥವಾಗುವದಿಲ್ಲ. ಕಪಟವನ್ನು ತೊಡೆದು ಹಾಕುವದೊಂದೇ ಇದರ ಉದ್ದೇಶ. ಅದು ಕರ್ಣಕಠೋರವಾಗಿ ತೋರುತ್ತದೆ. ದಂಡನೀತಿಯಲ್ಲಿ ನಂಬಿಕೆಯಿರುವವರೆಲ್ಲ ಬಹಿರಂಗವಾಗಿ ಹಾಗೆ ಸಾರಲಿ. ಒಡಲಲ್ಲಿ ಕತ್ತಿಯನು ಮಸೆಯುತ್ತ ಅಹಿಂಸೆಯ ಹೆಸರು ಉಚ್ಚರಿಸುವವರಲ್ಲಿ ಕಪಟ ವಂಚನೆಗಳಷ್ಟೇ ಅಲ್ಲ ಹೇಡಿತನವೂ ಅಡಕವಾಗಿದೆ. ಬ್ರಿಟಿಶ ಸರಕಾರದತ್ತ ನಾವು ವಹಿಸಿದ ಅಹಿಂಸಾನೀತಿ ದುರ್ಬಲರ ಅಹಿಂಸಾನೀತಿಯಾಗಿದೆ. ಹಾಗಲ್ಲದಿದ್ದರೆ ನಮ್ಮನಮ್ಮೊಳಗೆ ಈ ಕಚ್ಚಾಟಗಳೇಕೆ? ನಮ್ಮಲ್ಲಿ ಹಬ್ಬಿರುವ ವಿಸಂಘಟನೆ ಅಸ್ತವ್ಯಸ್ತತೆಗಳನ್ನು ಸಮರ್ಥಿಸಿಕೊಳ್ಳುವಸಲುವಾಗಿ ಇಂಗ್ಲಂಡಿನಲ್ಲಿನ "ಸ್ಕ್ವಾಟರ" [ಮನೆಗಳ ಅಭಾವದಿಂದ ಬಳಲುವವರು ಹೆರವರ ಖಾಲಿ ಮನೆಗಳಲ್ಲಿ ಹೋಗಿ ಠಾಣೆ ಹೂಡುವ] ಚಳವಳಿಯ ಕಡೆಗೆ ಬೆರಳು ತೋರಿಸುತ್ತೇವೆ. ಕುರುಡು ಅನುಕರಣೆಯಿಂದ ಕೆಲಸ ಸಾಧಿಸದೆಂಬುದು ನಮಗೆ ಮರೆತೇಹೋಗಿರುತ್ತದೆ. ದುರ್ಬಲ ನಿರ್ವೀರ್ಯರ ಠಕ್ಕು ಅಹಿಂಸೆಗಿಂತ ಮನುಷ್ಯನ ಅಂತರಂಗವನ್ನು ಕೀಳ್ಗಿಳಿಸುವ ವಸ್ತು ಬೇರೊಂದಿಲ್ಲ. ನಮ್ಮಲ್ಲಿ ಸಾಕಷ್ಟು ಅಹಿಂಸೆಯಿದ್ದರೆ ನಮ್ಮ ಸಾರ್ವಜನಿಕ ಜೀವನದಲ್ಲಿ ಅತ್ಯಂತ ಪರಮತಸಹಿಷ್ಣುತೆ ಕಾಣಿಸಿಕೊಳ್ಳುತಿತ್ತು. ಆಗ ಎಷ್ಟು ಅಭಿಪ್ರಾಯಗಳಿವೆಯೊ ಅಷ್ಟೂ ಪಕ್ಷಗಳಿರಬಹುದಿತ್ತು. ಆಗ ಅಭಿಪ್ರಾಯಭೇದಗಳು ಜೀವನನಿಯಮವಾದ, ಹಿತಾವಹವಾದ ಬೌದ್ಧಿಕ ಸ್ವಾತಂತ್ರ್ಯದ ದ್ಯೋತಕವಾಗುವವು ಹೊರತು ಪಕ್ಷವಿಪಕ್ಷಗಳ ಕುತಂತ್ರ-ಕಚ್ಚಾಟಗಳಿಗೆ ಕಾರಣವಾಗಲಾರವು. ಕುತಂತ್ರ ಕಚ್ಚಾಟಗಳು ಸ್ವಾತಂತ್ರ್ಯಕ್ಕೆ ಹೊಂದಿಕೆಯಾಗುವ ವಸ್ತುಗಳಲ್ಲ.

ಪ್ರಶ್ನೆ— ಹಿಂದೂ ಮುಸ್ಲಿಂ ಪ್ರಶ್ನೆಯನ್ನು ಹೇಗೆ ತುಡುಕಬೇಕು?

ಉತ್ತರ— ಈ ವಿಷಯದಲ್ಲಿ ನಾನು ಸೋಲೊಪ್ಪಿಕೊಳ್ಳಬೇಕು. ಇಂದು ನನ್ನ ದನಿ ಅರಣ್ಯರೋದನವಾಗಿದೆಯೆಂದು ನನಗೆ ಗೊತ್ತಿದೆ. ಆದರೂ ನನ್ನದೊಂದೇ ವ್ಯವಹಾರ್ಯ ಉಪಾಯವೆಂದು ಹೇಳಿಕೊಳ್ಳುತ್ತೇನೆ. ಒಂದು ಜಾತಿಯ ಕೆಲವರು ಅಮಾನುಷ ಕೃತ್ಯಗಳನ್ನು ನಡೆಸಿದರೆಂಬ ಕಾರಣದಿಂದ ಇಡಿ ಜಾತಿಯನ್ನೆ ಹಳಿದು ಬಹಿಷ್ಕರಿಸಬೇಕೆಂಬವರ ಅಭಿಪ್ರಾಯವನ್ನು ನಾನು ಒಪ್ಪುವದಿಲ್ಲ. ಮುಸ್ಲಿಂ ಲೀಗು ಬೇಕಾದರೆ ಹಿಂದುಗಳನ್ನು ನಿಂದಿಸಲಿ, ಹಿಂದುಸ್ತಾನವನ್ನು "ದರ್-ಉಲ್-ಹರಬ" (ಶತ್ರುರಾಜ್ಯ)ವೆಂದು ಕರೆದು ಅಲ್ಲಿಗೆ "ಜಿಹಾದ" (ಧರ್ಮಯುದ್ಧ)ದ ನಿಯಮವನ್ನು ಅನ್ವಯಿಸಲಿ, ಅಥವಾ ಕಾಂಗ್ರೆಸ್ಸಿನೊಡನೆ ಸಹಕರಿಸುವ ಎಲ್ಲ ಮುಸಲ್ಮಾನರು ಕೈಗೊಂಬೆಗಳೆಂದೂ ನಾಶಯೋಗ್ಯರೆಂದೂ ಸಾರಲಿ. ಆದರೆ ನಾವು ಮಾತ್ರ, ಈ ಹುಚ್ಚು ಬೊಬ್ಬೆಗೆ ಕಿವಿಗೊಡದೆ, ಎಲ್ಲ ಮುಸ್ಲಿಮರಲ್ಲಿಯೂ ಗೆಳೆತನ ಬೆಳೆಸಿ ಅವರನ್ನು ನಮ್ಮ ಪ್ರೀತಿ ಪಂಜರದ ಗಿಳಿಗಳನ್ನಾಗಿ ಮಾಡುವ ಪ್ರಯತ್ನವನ್ನು ಬಿಡಬಾರದು. ಲಕ್ಷಾಂತರ ಹಿಂದುಗಳು ಹೃದಯದಲ್ಲಿ ಸಿಟ್ಟುಹಗೆಗಳನ್ನಿರಿಸಿಕೊಳ್ಳದೆ ಚಿತ್ರವಧೆಗೆ ಗುರಿಯಾಗಲು ಸಿದ್ಧರಾದರೆ ನನ್ನುದ್ದೇಶ ಒಡನೆ ಕೈಗೂಡೀತು. ಇಂದು ಅಹಿಂಸೆಯನು ಕಲ್ಪನಾರಾಜ್ಯದ ಸೊತ್ತೆಂದು ನಗುವವರ ಮಾತಿನಲ್ಲಿ ತಥ್ಯವಿಲ್ಲದಿಲ್ಲ. ಆದರೂ ಹಿಂದೂ ಧರ್ಮವನ್ನು ಸಜೀವವಾಗಿಯೂ ಹಿಂದುಸ್ತಾನವನ್ನು ಅಖಂಡ

—೨೦ನೇ ಪುಟ ನೋಡಿರಿ

# ಪ್ರೇಮ ಪತ್ರಗಳು

ಶ್ರೀಕೃಷ್ಣ ಪಾಟೀಲ ಕಲಾಮಂಟಪ, ಬೆಳಗಾವಿ

ಪ್ರೇಮವಿವಾಹದ ಸಂಬಂಧ ನನ್ನ ಅಪನಂಬಿಕೆಯು ಕನ್ನಡ ತರುಣರಿಗೆ ಗೊತ್ತಾಗುವಂತಿದ್ದರೆ ಈ ಕತೆಯನ್ನು ನಾನು ಎಚ್ಚರದಿಂದ ಬರೆಯಬೇಕು. ಹಿಂದು—ಮುಸಲ್ಮಾನರ ಐಕ್ಯ! ಈ ದಿನಮಾನಗಳಲ್ಲಿ ಅವರ ಸಹಾನುಭೂತಿಯನ್ನು ಕಳೆದುಕೊಳ್ಳುವದು ನನಗೆ ಸಹಿಸದ ವಿಷಯ. ಅದರಲ್ಲಿಯೂ ತರುಣರ ಪ್ರೇಮಸಂಬಂಧವನ್ನು ಕುರಿತು ಒಂದು ಉಪದೇಶದ ಮಾತನ್ನು ಹೇಳುವದು ಯುಕ್ತವೆನಿಸಪು. ಹಾಗೆ ನಾನು ಮಾಡಲಾರೆ.

ತರುಣರು ತಮ್ಮ ಭಾವೀ ಪ್ರೇಯಸಿಗೆ ಪ್ರೇಮಪತ್ರಗಳನ್ನು ಬರೆಯುವರು, ಆದೇಕೆ ಈಗ ಬರೆಯುತ್ತ ಕುಳಿತಿರಬಹುದು. ಆ ಪ್ರೇಯಸಿಯು ಉತ್ತರವೆಂದು ತನ್ನ ಹೃದಯದ ಅಂತರಾಳವನ್ನು ಶಬ್ದಮುಖದಿಂದ ತಿಳಿಸುವಳು; ಆದೇಕೆ ಈಗ ತಿಳಿಸುತ್ತಿರಬೇಕು. ಇವರ ಈ ಪ್ರೇಮಗಂಗೆಗೆ ನಾನು ಬೇರೊಂದು ದಾರಿಯನ್ನು ತೋರಿಸಬಯಸುವದಿಲ್ಲ. ಅದು ನನ್ನ ಕೆಲಸವಲ್ಲ.

ಆದರೆ ಈ ಪ್ರೇಮಗಂಗೆಯಲ್ಲಿ ಗಾಯತ್ರಿಯು ಬೆಂಡಿನಂತೆ ತೇಲುವಳು, ಕಲ್ಲಿನಂತೆ ಮುಳುಗುವಳು, ಅಂತರಗಂಗೆಯಂತೆ ನಡುವೆ ಈಸುವಳು. ನನಗೆ ಅವಳ ಈ ಸಂಗತಿಯು ಒಂದು ಅಗಮ್ಯ ವಿಷಯವಾಗಿ ಕಂಡಿತು.

ಪ್ರೇಮ ಒಂದು ಸಹಜಪ್ರವೃತ್ತಿಯಾಗಬೇಕು. ಅದರ ಮೊಳಿಕೆಯಲ್ಲಿ, ಬೆಳವಣಿಗೆಯಲ್ಲಿ ಮತ್ತು ಹಣ್ಣಿನಲ್ಲಿ ಹುಳಿಯಾಗಬಾರದು. ಇನ್ನಷ್ಟು ನಾನು ತುಂಬಾ ಬಯಸುವ ವಿಷಯ. ನನ್ನ ಕನ್ನಡ ತರುಣರಿಗೆ ಈ ಸಂಗತಿ ಗೊತ್ತಿದೆಯೆಂದು ತಿಳಿದಿರುವೆ.

ಗಾಯತ್ರಿಗೆ ತನ್ನ ಹೃದಯವನ್ನು ಗೆದ್ದವನು ಯಾರೆಂದು ತಿಳಿಯದು. ತನ್ನ ಬರಿದಾದ ಪ್ರೇಮ ಪೀಠದಲ್ಲಿ ಯಾರನ್ನು ಕೂಡಿಸಬೇಕೆಂದೂ ಅರಿಯಳು. ಆದರೆ ಹೃದಯವೇನೊ ಒಂದು ಅವ್ಯಕ್ತ ಪೀಠವನ್ನು ನಿರ್ಮಿಸಿಕೊಂಡಿದೆ. ರತ್ನಸಿಂಹಾಸನದಿಂದ ಅಲಂಕರಿಸಿದೆ. ಹೂ—ಹಣ್ಣುಗಳನ್ನು ತುಂಬಹಾಸಿದೆ. ಜೀವನಂದಾದೀಪವನ್ನು ಉರಿಸುತ್ತಿದೆ. ಸುತ್ತೆಲ್ಲ ಪ್ರಕಾಶಯುತವಾಗಿ ಝುಗಝುಗಿಸುತ್ತಿದೆ. ಆಸೆಯು ಮೋನಗೊಂಡು ಕೈಜೋಡಿಸಿ ನಿಂತಿದೆ. ಕಣ್ಣು ದೂರದ ವರೆಗೆ ಹಬ್ಬಿಕೊಂಡು ನಿಂತ ಕತ್ತಲೆಯಿಂದ ತನ್ನ ಅಧಿಪತಿ ಬರಲಿರುವನೆಂದು ತೆರೆದು ನೋಡುತ್ತಿದೆ. ದಾರಿಯನ್ನು ಕಾದು ಕಾದು ಕಾದಿರುವಳು. ಈ ವರೆಗೆ ತಾನು ಪಡೆದುಕೊಂಡ ವಿದ್ಯೆ, ರೂಪ, ಅನುಭವಗಳನ್ನು ತನ್ನ ಅಧಿಪತಿಯ ಮುಂದಿಟ್ಟು ಪ್ರೇಮಭಿಕ್ಷೆಯನ್ನು ಪಡೆಯಬೇಕೆಂದು ಹಾತೊರೆದು ನಿಂತಿರುವಳು. ಆದರೆ ಈ ಪ್ರೇಮ—ತಪಸ್ಸಿನ ಪರೀಕ್ಷೆಯಲ್ಲಿ ಅವಳು ಇನ್ನೂ ಋಷಿಯಾಗಿಲ್ಲ ತಪಸಿಯಾಗಿಲ್ಲ, ಮುನಿಯಾಗಿಲ್ಲ ಕೇವಲ ಭಿಕ್ಷುಕಿ. ಈ ಮಾತನ್ನೂ ಅರಿತಿರುವಳು.

ಸರಿ. ಬೆಳಗಿನ ತಂಗಾಳಿ, ಪ್ರಕೃತಿಯ ಸೌಭಾಗ್ಯ, ಹಕ್ಕಿಗಳ ಚಿಲಿಪಿಲಿ; ಹಗಲಿರುಳಿನ ಮುಗಿಲ ಮಂಟಪದ ಸುಂದರ ದೃಶ್ಯ, ಕಿವಿ—ಕಣ್ಣನ್ನು ಸೇರಿ ಸಂತವಿಡುವವು. ಭಾವನೆಯು ಅತ್ಯುನ್ನತ ಶಿಖರವನ್ನೇರಿ ನಿಲ್ಲುವದು. ಆನಂದಲಹರಿಯು ಮೈತುಂಬಿ ಮಿಂಚಿನ ನವಿರೇರಿ ನಿಲ್ಲುವದು. ಒಮ್ಮೆಲೆ ವಿಷ್ಣುಚರಣನು ಪೀಠವನ್ನಲಂಕರಿಸುವನು. ಆಗಲೆ ಕೈ ಮುಂದೆ ಚಾಚಿ ಭಕ್ತಿಯನ್ನು ಸಲ್ಲಿಸಬಯಸುವಳು. ಆದರೆ ಪ್ರಜ್ಞೆ ಹಿಡಿದು ನಿಲ್ಲಿಸುವದು. ತಾರತಮ್ಯಜ್ಞಾನ ತನ್ನ ಕುದುರೆಯನ್ನು ಮುಂದೂಡಿ 'ವಿಚಾರಿಸು!' ಎನ್ನುವದು.

ವಿಷ್ಣುಚರಣ !

ಇವನೊಬ್ಬ ಕವಿ. ಕನ್ನಡ ಸಾಹಿತ್ಯದಲ್ಲಿ ವಿಷ್ಣು ಚರಣನ ಕವಿತೆಗೆ ಮನ್ನಣೆಯಿದೆ, ಗೌರವವಿದೆ, ಕನ್ನಡ ಪ್ರಪರೀಚವೇ ಹಾಡಿಕೊಂಡು ನಲಿಯುತ್ತುಂಟು. ಜೀವಿಗಳ ಆದರ್ಶತೆಗೂ ರಸಪುಷ್ಟಿಗೂ ಮಾಧುರ್ಯಕ್ಕೂ ಸಾಕಾಗುವಷ್ಟು ಅನ್ನವುಂಟು. ಮಲ್ಲಿಗೆಯ ಹೂವಿನಂತೆ ಕವಿತೆಗಳು ಮನೋಹರವಾಗಿವೆ. ಆದರೆ ಕವಿಗೆ ತನ್ನದೆಂದು ನಿಲ್ಲಲು ನೆಲವಿದೆಯೇ? ಬಳಿಸಲು ಧನವಿದೆಯೇ? ನೆಲ ಸಿಗುವದುಂಟೀ? ಧನ ದೊರೆಯುವದುಂಟೀ? ದರಿದ್ರ ಮನೆತನದಲ್ಲಿ ಬೆಳೆದುಬಂದ ಕವಿಗೆ ಮುಂದೆ ಲೌಕಿಕ ಪ್ರಪಂಚದಲ್ಲಿ ನಡೆದಾಡಲು ಒಂದು ಗೇಣು ನೆಲ ಬೇಡವೇ! ಹಿಡಿತುಂಬ ಧನ ಬೇಡವೇ! ಅವನು ಕಟ್ಟಿದ ಗಾಳಿಗೋಪುರದಲ್ಲಿ ನೀನು ನಿಲ್ಲಬೇಕೇ! ಆ ಗಾಳಿಗೋಪುರದ ಶಬ್ದಗಳು, ಭಾವನೆಗಳು, ರಸವು ಒಸರಿಹೋದರೆ ಬೈಲೇ ಮನೆಯಾದೀತು! ಆಕಾಶವೇ ಚಪ್ಪರವಾದೀತು! ಕವಿಯು ಕಡೆಗೆ ಕಪಿಯಾಗಿ ಗಿಡದ ನೆರಳನ್ನು ಆಶ್ರಯಿಸಿದರೆ ಹೇಗೆ! ಪ್ರಪಂಚದ ಕಣ್ಣಿನಾಶ್ರಯದಲ್ಲಿ ನಿಂತ ಕವಿಯನ್ನು ನಂಬಬೇಡ. ಅವನು ಕವಿ. ಭಾವನೆಯ ಅಡಿಗಲ್ಲ ಮೇಲೆ ನಿಂತ ಹೊಳೆಯುವ ನೀರಗುಳ್ಳಿ! ಎಚ್ಚರ...! ಎಂದು ಓಯೆಂದು ಬಾಯಿ ತೆರೆದು ಪ್ರಶ್ನಿಸುವದು. ಗಾಯತ್ರಿಯ ಕೈಕಾಲುಗಳ ನಾಡಿಗಳು ಹರಿದಂತೆನಿಸುವದು, ತತ್ತರಿಸುವಳು, ಕವಿಯು ಪೀಠದಿಂದ ಓಡುವನು ಮತ್ತೆ ಅಂಧಕಾರ......

ಬರಿ ಶೂನ್ಯ. ಶೂನ್ಯಮಯ ತರಂಗಮಾಲೆಯಲ್ಲಿ ತನ್ನ ಅಸ್ತಿತ್ವವೇ ಶೂನ್ಯ. ನಾನಾರೆಂಬ ಪ್ರಜ್ಞೆಗೆ ಎಡೆಯಿಲ್ಲ. ನನ್ನ ಗುರಿಯೇನೆಂಬ ಅನುಭವಕ್ಕೆ ನೆಲವಿಲ್ಲ. ಬರಿ ಶೂನ್ಯ! ದಶ ದಿಕ್ಕುಗಳನ್ನು ಮುಕ್ಕುರಿಗೊಂಡ ಅಂಧಕಾರವೇ ಅಂಧಕಾರ! ಈ ನಿರ್ದ್ವಂದ್ವವು ಕೆಲ ಸಮಯ ಕಳೆದಿರಬೇಕು. ಆಸೆ ರೂಪಗೊಂಡಿತು. ದೂರ ದಿಗಂತದ ಕೊನೆಯಿಂದ ಬಂದು ಕಿಡಿಯು ಸಿಡಿದೆದ್ದಿತು. ಕಿಡಿಗೆ ಬೆನ್ನನ್ನು ತುಗುಲಿಸಿಕೊಂಡು ಒಂದು ಅಸ್ಪಷ್ಟ ವ್ಯಕ್ತಿ. ಭೃಂಗದ ಬೆನ್ನೇರಿ ಬಂದಿತು! ಇನ್ನೂ ಬಂದಿತು! ಹ...! ಧನಂಜಯನು!! ವಿಷ್ಣುಚರಣನು ತೊರೆದ ಪೀಠವನ್ನಲಂಕರಿಸಿದನು. ಗಾಯತ್ರಿಯ ಮೊಗದಲ್ಲಿ ಮುಗುಳು ನಗೆ! ಅಮೃತಹಸ್ತದಿಂದ ಎಚ್ಚರಿಸಿದಂತಾಯಿತು. ಮುಂದುವರೆದು ಭಕ್ತಿಯನ್ನು ಸಲ್ಲಿಸುವಳು... ಪ್ರೇಮಭಿಕ್ಷೆಯನ್ನು ಬೇಡುವಳು... ಆದರೆ ವಿರೋಧಪ್ರಜ್ಞೆ ಇಣಕಿಕ್ಕಿತು. ತನ್ನ ಅನುಭವ ಕುದುರೆಯನ್ನು ಮುನ್ನೂಕಿವಾ! ಎಂದು ನುಡಿದು ನಿಲ್ಲಿಸಿತು. 'ವಿಚಾರಿಸು'

ಧನಂಜಯ !

ಗಾಯತ್ರೀ, ಧನಂಜಯನು ಲಕ್ಷಾಧಿಪತಿಯ ಮಗನು. ತಂದೆಯ ತರುವಾಯ ಕುಬೇರ ಸದೃಶನಾಗಿ ನಿಲ್ಲುವನು. ಸಾಕಷ್ಟು ಕಲಿತಿರುವನು. ಉದ್ದವಾಗಿ ಹಬ್ಬಿ ನಿಂತ ಬಾಳಿಗೆ ಈ ಕಲಿತ ವಿದ್ಯೆ ಸಾಕು. ನಿನಗೂ ನಿನ್ನ ಮಕ್ಕಳು ಮರಿಗಳಿಗೂ ತಿನ್ನುಣ್ಣಲು ಕೊರತೆಯಿಲ್ಲ. ಮಲ್ಲಿಗೆಯ ಹೂವಿನ ಮೇಲೆ ನಲಿದಾಡುವ ಭೃಂಗದಂತೆ ಹಗುರಾಗಿ ಬಾಳನ್ನು ಸಾಗಿಸಬಹುದು. ದಾಸ ದಾಸಿಯರು ನಿನ್ನ ಆಜ್ಞೆಯ ಉಸಿರಿಗೆ ಕೈಜೋಡಿಸಿ ನಿಂತು ನೆರವೇರಿಸಬಹುದು. ಎಲ್ಲ ಸರಿ. ಆದರೆ ಅವನ ದುಡ್ಡು ಎಷ್ಟು ಜನ ಬಡವರ ಸುಲಿಗೆಯಿಂದ ಸಂಗ್ರಹಿಸಲಾಗಿದೆ ಹೇಳಬಲ್ಲೆಯಾ? ಸಾವಿರ ಜನ ದರಿದ್ರರಲ್ಲಿ ಬಾಳುವ ನಿನ್ನ ಜೀವನವು ಸುಖಮಯವಾಗಿ ನಡೆಯಬಹುದೇ! ಅರೆ ಹೊಟ್ಟೆ ಉಣ್ಣುವ ಬಡವರು ಮೃಷ್ಟಾನ್ನದಿಂದ ತುಂಬಿದ ನಿನ್ನ ಹೊಟ್ಟೆಯನ್ನು ಕಂಡು ಸುಮ್ಮನಿರಬಹುದೆ! ಗುಡಿಸಲಲ್ಲಿ ಚಳಿಯಿಂದ ಮಕ್ಕಳೊಡನೆ ನಡುಗುವ ಕಡುಬಡವರಿಗೆ ನಿನ್ನ ರಾಜಮಂದಿರವು ಅಣಕದ ಮನೆಯಾಗಿ ನಿಲ್ಲಲಾರದೇ! ಹರಕು ಬಟ್ಟೆಯಿಂದ ಓಡಾಡುವ ನಿರ್ಗತಿಕರು ನಿನ್ನ ಮೈಮೇಲಿನ ರೇಶಿಮೆಯ ಬಟ್ಟೆಯನ್ನು ನೋಡಿ ಸುಮ್ಮನಿರಬಹುದೇ! ನಿನ್ನ ದೌಲತ್ತನ್ನು ಹರಿದು ಹಂಚಿಹಾಕಬೇಕೆಂದು ಅವ್ಯಕ್ತ ಪ್ರತಿರೋಧಿಗಳು ಸುತ್ತೆಲ್ಲ ನಿಂತಿರಲು ನಿನ್ನ ಬಾಳು ಎಂಥ ಬಾಳು! ಸರಿ. ಇಂಥ ಅಲೌಕಿಕ ಕೀರ್ತಿಯಿಂದ ಎಷ್ಟು ದಿನ ಬದುಕಬಹುದು! ಹಣವು ನಾಲ್ಕು ದಿನದ್ದು. ಹಣದ ಮೇಲೆ ನಿಂತ ನಿನ್ನ ಗಂಡ ನಾಳೆ ಏನಾಗಬಹುದು? ಹೋಗಲಿ. ಅವನ ಮಕ್ಕಳು ಈ ಹಣವನ್ನು ಹೀಗೆಯೇ ಕಾದುಕೊಂಡು ಬರಬಹುದೆ! ಅದೂ ಹೋಗಲಿ. ಅವರ ಮಕ್ಕಳು? ಗಾಯತ್ರಿಯ ಮೊಮ್ಮಕ್ಕಳು? ಮರಿಮಕ್ಕಳು? ಇಂದಿಗೆ ಅವರು ತಿರುಕರು! ಆಗ ನೀನು ಯಾವ ಸ್ಥಿತಿಯಲ್ಲಿದ್ದರೂ ಈ ಮಾತನ್ನು ಸಹಿಸಬಲ್ಲೆಯಾ? ಗಾಯತ್ರೀ, ಮಾನವನ ಜೀವನವು ಅತ್ಯಲ್ಪವೆನಿಸಿದರೂ ಹೆಸರು ತ್ರಿಕಾಲಾಬಾಧಿತವಾಗಿ ಬಾಳಬಹುದು. ಇಹವು ಅದರ ರಂಗಸ್ಥಳವಾಗಿ ನಿಂತಿದೆ. ಸಾಧಿಸು. ಏನಾದರು ಸರಿ, ಒಂದು ಆದರ್ಶವನ್ನು ಸಾಧಿಸು, ಅದರಲ್ಲಿಯೆ ಸವೆ, ಸಾಯು, ಸುಣ್ಣವಾಗು. ಚಿಕ್ಕದಾದರೂ ಸರಿ. ಒಂದು ಆದರ್ಶ ಧ್ವಜವನ್ನು ಎತ್ತಿ ಹಿಡಿ. ಧನಕ್ಕಾಗಿ ಆತನನ್ನು ಮದುವೆಯಾಗಬೇಡ. ನಿರ್ಧನಿಕನೆಂದು ಅವನನ್ನು ಮದುವೆಯಾಗುವೆಯಾ? ... ... ... ...

ಧನಂಜಯನು ಅದೃಶ್ಯನಾದನು. ಮತ್ತೆ ಅಂಧಕಾರಶೂನ್ಯ ಸಾಮ್ರಾಜ್ಯವು ಹಬ್ಬಿಕೊಂಡಿತು.

ಕತ್ತಲೆಯು ರಾಶಿರಾಶಿಯಾಗಿ ಅಡಕಲೇರಿ ನಿಂತಿದೆ. ಮುಗಿಲಾವದು, ನೆಲವಾವದು, ಕ್ಷಿತಿಜ ಯಾವುದು ಒಂದೂ ತಿಳಿಯದು. ಗಂಭೀರ ಗಾಢಾಂಧಕಾರವು ಶೂನ್ಯದಲ್ಲಿ ಪೋಣಿಸಿಕೊಂಡು ನಿಂತಿದೆ. ಗಟ್ಟಿಯಾಗಿ ಉಸಿರಿಡುವಂತಿಲ್ಲ. ನಾಡಿಯ ಸೂಕ್ಷ್ಮ ಸ್ಪಂದಗಳು ಕ್ಷಿತಿಜಭಿತ್ತಿಗೆ ಬಡಿದು ಮರುನುಡಿಗುಡುತ್ತವೆ. ಅವು ಸಹ ಅಸ್ಪಷ್ಟ ! ಭಯಾನಕ ರುದ್ರಮೌನವು ತೂಕಡಿಸುತಿದೆ. ನಡುವೆ ಅಸ್ಪಷ್ಟ ನೆರಳಿಕೆಯಂತೆ ಪ್ರತಿಧ್ವನಿಯ ಕಿರುಕಿರು ಸಪ್ಪಳ. ಅಸ್ಪಷ್ಟ! ಅಶ್ರುತ! ಅವ್ಯಕ್ತ! ಅಂಧಕಾರ! ಗಾಯಿತ್ರಿಯು ನಿರ್ನಾಮವಾಗಿ ನಿಂತಿರುವಳು. ಬುದ್ಧಿ, ಅನುಭವ, ಪ್ರಜ್ಞೆ ಶೂನ್ಯದಲ್ಲಿ ಲಯವಾಗಿದೆ- ನಾನೆಂಬ ಅಹಂಭಾವವು ಗಾಢನಿದ್ರೆಯಲ್ಲಿ ಮುಳುಗಿದೆ. ಕ್ರಿಯಾಶೂನ್ಯಳಾದ ಗಾಯಿತ್ರಿಗೆ ನೆಲವೂ ಮುಗಿಲೂ ಒಂದೇ ಒಂದು! ...... ಕೊನೆಯ ದಿನದ ಮಹಾಸ್ವಪ್ನದಂತೆ ... ...

ಕಣ್ಣುಕೊರೆವ ಒಂದು ಸ್ಫುಲಿಂಗವು ಹಾರಿಕೊಂಡು ಬಂದಿತು. ಅದರ ಬೆಳಕೆಲ್ಲ ಒಟ್ಟುಗೂಡಿ ಒಂದು ವ್ಯಕ್ತಿಯಾಯಿತು. ಓ! ಮುಖವು ಪರಿಚಿತ ಅಹುದು. ಮುಂದಕ್ಕೆ ಬಂದಿತು. ಹೃದಯ ಸಿಂಹಾಸನದ ಬಳಿ ಬಂದಿತು. ಹೂ, ಹಣ್ಣು, ಕಾಯಿಗಳೆಲ್ಲ ನಿಚ್ಚಳವಾಗಿ ಕಾಣಹತ್ತಿದವು. ಜೀವ ನಂದಾದೀಪವು ಹೆಚ್ಚು ಪ್ರಖರವಾಗಿ ಉರಿಯಹತ್ತಿತು. ಹೂಗಳೆಲ್ಲ ಕುಲುಕುಲು ನಕ್ಕು ಮಕರಂದ ಬೀರಿದವು. ಬಂದಿತು! ರತ್ನ ಸಿಂಹಾಸನವನ್ನಡರಿ ಮುಗುಳುನಗೆಯನ್ನು ಬೀರಿತು. ಯಾರು? ಶಿಶುಮಾರ! ಗಾಯತ್ರಿಯ ಹೃದಯವನ್ನು ಕದಿಯನಿಂತ ನಲ್ಲನು. ಗಾಯತ್ರಿಯ ಮೈತುಂಬ ಮಿಂಚು ತುಳುಕಾಡಿತು. ಆಸೆಯು ಬಾಯಿಬಿಟ್ಟು ಸಿಡಿಲಿನಂತೆ ಬೆದರಿ "ನಲ್ಲ" ಎನ್ನುವದರಲ್ಲಿದ್ದಿತು. ಹೂಗಳನ್ನು ಎರಚಿ ಕಾಲು ಹಿಡಿಯ ಧಾವಿಸಿದಳು. ನಿರ್ಧಾರ ಮುಂದೆ ಹೆಜ್ಜೆ ಇಡಿಸಿತು. ಹಂಸಿಯಾಗಿ ಜೀವಗೀತವನ್ನು ಹಾಡಬೇಕೆಂದು ಬಾಯಿಬಿಟ್ಟಳು. ಆದರೆ ಬುದ್ಧಿ ಹಾ! ಎಂದಿತು ವಿವೇಕವು ಸಾಧಕ- ಬಾಧಕ ತೊಡಕುಗಳ ಸಂತೆಯನ್ನು ಹರಡಿತು. ವಿಪರೀತ ವಾದತ್ವವು ಗಾಯತ್ರಿಯ ಕೈಹಿಡಿದು ನಿಲ್ಲಿಸಿ ಕಣ್ಣಲ್ಲಿ ಕಣ್ಣಿಟ್ಟು ನೋಡಹತ್ತಿತು. ಗಾಯತ್ರಿಯು ತಡೆದಳು ಕಿವಿಯನ್ನು ಅರಳಿಸಿ ಏನೆಂದಳು-

ಶಿಶುಮಾರ

ಗಾಯತ್ರೀ, ಶಿಶುಮಾರನನ್ನು ನೀನು ಬಲ್ಲೆ. ನಿಮ್ಮ ಕಾಲೇಜ ಗೆಳೆಯರಲ್ಲಿ ಅವನು ಕಾಮಸದೃಶರೂಪನು. ಈ ಸಾರೆ ತನ್ನ ವಿದ್ಯಾಲಯದ ಅಭ್ಯಾಸ ಅವನು ಮುಗಿಸಬಹುದು. ಎಲ್ಲಿಯಾದರೂ ಒಂದು ನವಕರಿಯನ್ನು ಹಿಡಿಯಬಹುದು. ಜೀವನಕ್ಕೆ ಸಾಕಾಗುವಷ್ಟು ಸಂಬಳವು ದೊರೆಯಬಹುದು- ಅವನು ನಿನ್ನ ನಲ್ಲನಾಗಲು ಯೋಗ್ಯ. ನಿನ್ನಲ್ಲಿಯ ಸ್ತ್ರೀಸೌಂದರ್ಯಕ್ಕೆ ಅವನು ಯೋಗ್ಯನೆ ಸರಿ. ಆದೇಕೆ? ಅವನಲ್ಲಿಯ ಪುರುಷ ಸೌಂದರ್ಯದ ಮುಂದೆ ನೀನು ಕಡಿಮೆ ಬೆಲೆಯವಳೆಂದರೂ ಒಪ್ಪಬೇಕು. ನಿನ್ನ ವಿದ್ಯಾಲಯದ ಅನೇಕ ಹೆಣ್ಣುಮಕ್ಕಳು ಅವನನ್ನೇ ಪತಿಯಾಗಿ ಸೆಳೆಯಬೇಕೆಂದು ಹಾತೊರೆದು ನಿಂತಿರುವರು. ಅವನ ಮುಖದಲ್ಲಿ ತುಳುಕಾಡುವ ಪೌರುಷ, ಅಂಗಾಂಗದಲ್ಲಿ ಪುಟಿನೆಗೆವ ತಾರುಣ್ಯ, ಕೋಗಿಲೆಗೆ ಸಮಾನವಾದ ಕಂಠ ಯಾರನ್ನಾದರೂ ಮೋಹಗೊಳಿಸುವಂಥದು. ರಾಜಕುಮಾರಿಯು ಅವನನ್ನು ವಂಚಿಸದಿರುವಳೇ! ಅವಳು ಹರಡಿದ ಬಲೆ ನಿ[illegible] ದೊಡ್ಡದು. ಅವನ ಸೌಂದರ್ಯಜ್ವಾಲೆಗೆ ನೀ[illegible] ಮಾರುಹೋಗಿ ಪತಂಗದಂತೆ ಹಾರಾಡುವಿ[illegible] ಅವನ ಸೌಂದರ್ಯ ನಿನ್ನ ಕಣ್ಣಿಗೂ ಮನಕ್ಕೂ ಭಾವೀ ಜೀವನಕ್ಕೂ ಹಬ್ಬ! ಆದರೆ [illegible] ಸರಿಯೇ? ಅವನ ಸೌಂದರ್ಯ ಎಷ್ಟು ದಿನದ್ದು? ಮುಪ್ಪು ಅದನ್ನು ಇನ್ನು ೧೦-೨೦ ವರುಷದಲ್ಲಿ ನುಂಗಿ ಬಾಯಹಲ್ಲು ಉದಿರಿಸಿ, ಕೆನ್ನೆಯ ಮಾಂಸವನ್ನು ಬಳಿದು ಕಪ್ಪು ಉಂಗರದ ಕೂದಲುಗಳಿಗೆ ಸುಣ್ಣವನ್ನು ತೊಡೆದು ತಲೆಯನ್ನು ನಡುಗಿಸಹತ್ತವೇ ? ಹೋಗಲಿ, ಜೀವಸಾಗರದಲ್ಲಿ ಬೇನೆ-ಬೇಸರಿಕೆ, ಅಪಘಾತ ಅಪಸ್ಮಾರಗಳು ಕಣ್ಣುತೆರೆದು ನೂರಾರು ಮುಖದಿಂದ ನಿಂತಿವೆ. ಅವುಗಳ ಬಾಯಿಗೆ ಒಮ್ಮೆ ಸಿಕ್ಕನಾದರೆ ರೂಪವು ಎಲ್ಲಿಯೋ ಗಾಳಿಯಲ್ಲಿ, ಸೂರ್ಯಪ್ರಕಾಶದಲ್ಲಿ ಲಯವಾಗಿ ಹೋಗುವದು. ಇಂದಿನ ಅವನ ಸೌಂದರ್ಯವನ್ನು ಕಣ್ಣಕುಣಿಕೆಯಲ್ಲಿ ತುಂಬಿ ನಿಂತ ನಿನ್ನ ಮನಸು ಆ ರೂಪವನ್ನು ನೋಡಿ ಸಂತೋಷಪಡಬಹುದೇ! ರೂಪವು ಮುಂಜಾವಿನ ಹುಲ್ಲಮೇಲೆ ನಿಂತ ತುಂತುರುವನಿಯಂತೆ ಒಂದು ಗಾಳಿ, ಒಂದಿಷ್ಟು ಬಿಸಲಿಗೆ ಬಾಡಿಹೋಗುವಂತೆ ಅದು ಹೋಗಬಹುದು. ಮುಂದೆ? ಅದು ಹೋಗಲಿ. ಆ ಸೌಂದರ್ಯಶಾಲಿಯು ಎಷ್ಟು ದಿನ ನಿನ್ನ ಆರಾಧ್ಯದೇವತೆಯಾಗಿ ನಿಲ್ಲಬಹುದು! ಪುರುಷಭೃಂಗದಂತೆ ಚಂಚಲರೂಪಕ್ಕೆ [illegible]ಳಾಗಬೇಡ. ಅವನ ಮುಖಕ್ಕೆ ಕಪ್ಪು ಬಳೆ. ಆಮೇಲೆ ನೋಡು ಸುಂದರನಾಗಿ ಕಾಣುವನೇ? ಕಂಡರೆ ಮದುವೆಯಾಗು, ಎಂದು ದಿಗಂತ ಒಂದು ತುದಿಯಿಂದ ಗಂಟೆ ಕಟ್ಟಿ ಹೊಯಲಿಟ್ಟಂತೆ ನುಡಿಯಿತು. ಶಿಶುಮಾರನು ಅದೃಶ್ಯನಾದನು. ಮತ್ತೆ ಅಂಧಕಾರ - - - -

ಈ ದಿವ್ಯ ರುದ್ರಚಿತ್ರವನ್ನು ನೋಡಿ ಗಾಯತ್ರಿಯು ದಿಙ್ಮೂಢಳಾದಳು. ತಲೆಯು ದಿಮಿದಿಮಿಸಹತ್ತಿತು. ಕೈಕಾಲುಗಳು ಸೇದಿ ಶಕ್ತಿಗುಂದಿದವು. ಅಸಹಾಯಳಾಗಿ ಒಂದು ಕುರ್ಚಿಯ ಮೇಲೆ ಒರಗಿದಳು, ಎಷ್ಟೋ ಸಮಯದ ವರೆಗೆ ಈ ಮೂರು ಚಿತ್ರಗಳು ಹಿಂದುಮುಂದಾಗಿ ಸರಿದಾಡಿದವು. ಒಂದೂ ನಿರ್ಧಾರವಿಲ್ಲ. ಎಲ್ಲ ಭಯಾನಕ. ಬುದ್ಧಿ ತತ್ತರಿಸಿತು. ವಿಚಾರ ಶೂನ್ಯಳಾಗಿ ಹಾಗೆಯೆ ಕುಳಿತಳು.

ಈ ಕನಸಿನಿಂದ ಗಾಯತ್ರಿಯ ನಿ[illegible] ಶಕ್ತಿಯು ಮತ್ತಷ್ಟು ದೂರ ಸರಿಯಿತು. ತನಗೂ ಅವರಿಗೂ ತುಂಬಲಾರದ ಅಂತರವಾಯಿತೆಂದಳು. ಆದರೆ ಅದೆಲ್ಲ ಕಲ್ಪನಾರಾಜ್ಯದಿಂದ್ದ ವಿಚಾರಿಸಿದರೆ......

—೨—

ಒಂದಿನ ತನ್ನ ಅಭ್ಯಾಸದ ಕೋಣೆಯಲ್ಲಿ ಕುಳಿತಿರುವಳು. ಮುಂಜಾವಿನ ಫಲಾಹಾರ ಆದೇ ತೀರಿಸಿರುವಳು. ಕಾಲೇಜಿನ ಅಂದಿನ ಅಭ್ಯಾಸವನ್ನು ಒಂದೊಂದಾಗಿ ನೋಡಿಕೊಳ್ಳುತ್ತಿರುವಳು. ಕಪಾಟಿನಲ್ಲಿಯ ಇನ್ನೊಂದು ಪುಸ್ತಕಕ್ಕೆ ಕೈ ಹಾಕಿದಳು. ವಿಷ್ಣುಚರಣನ ಪ್ರೇಮಪತ್ರಗಳ ಗಂಟು ಇಳಿಮುಖದಿಂದ ಕಂಡವು. ಕೈಗೆ ತೆಗೆದುಕೊಂಡಳು ಒಂದೊಂದಾಗಿ ಓದಹತ್ತಿದಳು. ಕವಿಯ ಪ್ರತಿಯೊಂದು ಪತ್ರದಲ್ಲಿ ಪ್ರೇಮದ ಪವಿತ್ರ ಗಂಗೆ ತುಳುಕಾಡುತಿದೆ. ಅವುಗಳೆಲ್ಲ "ಗಾಯಿತ್ರಿ, ಪ್ರೇಮವು ವಂಚನೆಯಲ್ಲ. ಈಶ್ವರೀಶಕ್ತಿಯಿದೆ. ಮನುಷ್ಯನು ಹುಟ್ಟುವ, ಸಾಯುವ; ಆದರೆ ಪ್ರೇಮದ ಅಗಾಧ ಶಕ್ತಿಯನ್ನು ಜೀವನದ ಯಾವ ಶಕ್ತಿಯಿಂದ ಅಳೆಯಬಹುದು? ಎರಡು ಜೀವ ಒಂದುಗೂಡಿದರೆ ಪ್ರೇಮದ ತಿಳಿಗಂಗೆಯ ಅರ್ಥ. ಅದೊಂದು ಜೇನು ಹೊಳೆ! ಪ್ರೇಮ ಪ್ರೇಮವೇ ಸರಿ! ಬೇರೊಂದು ಹೆಸರಿಲ್ಲ. ಗಾಯತ್ರೀ, ನಿನ್ನನ್ನು ಯಾವ ಪೌರುಷ ಶಕ್ತಿಯಿಂದ ವರ್ಣಿಸಲಿ? ನಿನ್ನ ಮುಂದೆ ನನ್ನ ಭಾವನೆ ಬರಡು, ಕಲ್ಪನೆ ಕನಸು,

—೧೯ನೇ ಪುಟಕ್ಕೆ

## ಕರ್ನಾಟಕ ವಿಶ್ವವಿದ್ಯಾನಿಲಯ

ಕರ್ನಾಟಕಕ್ಕೆ ಸ್ವತಂತ್ರ ಪ್ರಾಂತವಿಲ್ಲದ್ದರಿಂದ ಅದು ಬಗೆಬಗೆಯ ಕಷ್ಟನಷ್ಟಗಳಿಗೀಡಾಗುತಿರುವುದು ಸರ್ವಶ್ರುತ. ಅಂತೆಯೆ ಸ್ವತಂತ್ರ ಪ್ರಾಂತಕ್ಕಾಗಿ ಕರ್ನಾಟಕ ಕಳೆದ ಕಾಲು ಶತಮಾನದಿಂದ ಪ್ರಯತ್ನಿಸುತಿದೆ. ಸ್ವತಂತ್ರ ವಿಶ್ವವಿದ್ಯಾನಿಲಯ ಸ್ವತಂತ್ರ ಪ್ರಾಂತದಷ್ಟೆ ಮಹತ್ವದ್ದೆಂದು ಬೇರೆ ಹೇಳಬೇಕಿಲ್ಲ. ಮಕ್ಕಳ ವಿದ್ಯಾಭ್ಯಾಸಕ್ಕಾಗಿ ವಿಶ್ವವಿದ್ಯಾನಿಲಯ ಇರಬೇಕಾದುದು ಅತ್ಯವಶ್ಯ. ಅಂತೆಯೆ ಕರ್ನಾಟಕಸ್ಥರು ಈ ಶತಮಾನದ ಪ್ರಾರಂಭದಿಂದಲೆ ಕರ್ನಾಟಕ ವಿಶ್ವವಿದ್ಯಾನಿಲಯಕ್ಕಾಗಿ ಪ್ರಯತ್ನಿಸುತಿರುವರು. ಆದರೆ ಕನ್ನಡಿಗರ ವರ್ಚಸ್ಸು ಮುಂಬಯಿ ಪ್ರಾಂತದ ಮುಖ್ಯಾಧಿಕಾರಿಗಳ ಮೇಲೆ ಈ ವರೆಗೆ ಅಷ್ಟೊಂದು ಬೀಳದಿದ್ದುದರಿಂದ ಸ್ವತಂತ್ರ ವಿಶ್ವವಿದ್ಯಾನಿಲಯದ ಬೇಡಿಕೆ ಹಿಂದೆ ಬೀಳುತ್ತ ನಡೆದಿದೆ. ಈಗ ಮುಂಬಯಿ ಪ್ರಾಂತದ ಶಿಕ್ಷಣ ಸೂತ್ರಗಳು ಕಾಂಗ್ರೆಸ ಮಂತ್ರಿಮಂಡಳದ ಕೈಯಲ್ಲಿ ಬಂದದ್ದರಿಂದ ಭಾಷಾನ್ವಯ ಪ್ರಾಂತರಚನೆ ಮತ್ತು ಪ್ರಾದೇಶಿಕ ವಿಶ್ವವಿದ್ಯಾನಿಲಯ ಸ್ಥಾಪನೆ ಮುಂತಾದ್ದನ್ನು ಪ್ರತಿಪಾದಿಸುತಿರುವ ಕಾಂಗ್ರೆಸ್ಸು ಸ್ವತಂತ್ರ ವಿಶ್ವವಿದ್ಯಾನಿಲಯ ಸ್ಥಾಪನೆಗೆ ಬೆಂಬಲ ಕೊಡುವುದು ಸ್ವಾಭಾವಿಕ. ಕರ್ನಾಟಕ ವಿಶ್ವವಿದ್ಯಾನಿಲಯ ಶಿಷ್ಟಮಂಡಳದವರು ಮುಂಬಯಿಯ ಪ್ರಸಿದ್ಧ ವಕೀಲರಾದ ಶ್ರೀ ಜಾಗಿರದಾರ ರಂಗಾಚಾರ್ಯರ ನೇತೃತ್ವದಲ್ಲಿ ಮುಖ್ಯ ಮಂತ್ರಿಗಳನ್ನು ಕಂಡು ಕರ್ನಾಟಕ ವಿಶ್ವವಿದ್ಯಾನಿಲಯ ಸ್ಥಾಪನೆಯ ಬಗ್ಗೆ ಪ್ರಕಟನೆಯೊಂದನ್ನು ಹೊರಡಿಸಬೇಕೆಂದೂ ಈ ಬಗ್ಗೆ ಸಲಹೆ ಸೂಚನೆಗಳನ್ನೊಳಗೊಂಡ ವರದಿಯನ್ನೊಪ್ಪಿಸಲು ಒಂದು ಸಮಿತಿಯನ್ನು ನೇಮಿಸಬೇಕೆಂದೂ ಬಿನ್ನವಿಸಿಕೊಂಡರು. ಮುಖ್ಯ ಮಂತ್ರಿಗಳು ಶಿಷ್ಟಮಂಡಳದವರ ಹೇಳಿಕೆಯನ್ನು ಸಮಾಧಾನದಿಂದ ಕೇಳಿಕೊಂಡು ಎರಡೂ ಬೇಡಿಕೆಗಳನ್ನು ಮನ್ನಿಸುವ ಆಶ್ವಾಸನವಿತ್ತರೆಂದು ತಿಳಿಯುತ್ತದೆ. ಪ್ರಾದೇಶಿಕ ವಿಶ್ವವಿದ್ಯಾನಿಲಯದ ಬೇಡಿಕೆ ೧೯೨೪ ರಲ್ಲಿ ಸರ್ ನಾರಾಯಣ ಚಂದಾವರಕರರ ಅಧ್ಯಕ್ಷತೆಯಲ್ಲಿ ಮುಂಬಯಿಯಲ್ಲಿ ಕೂಡಿದ ಶಿಕ್ಷಣ ಪರಿಷತ್ತಿನಲ್ಲಿ ಮೊದಲು ಮಂಡಿಸಲ್ಪಟ್ಟಿತು. ೧೯೩೦ ರಲ್ಲಿ ಸ್ಯಾಡ್ಲರ ಕಮೀಶನ್ನಿನವರು ಇದಕ್ಕೆ ಬೆಂಬಲ ಕೊಟ್ಟರು. ಅನಂತರ ಸರ್ ಚಿಮಣಲಾಲ ಸೆಟ್ಲವಾಡರ ಅಧ್ಯಕ್ಷತೆಯಲ್ಲಿ ನೇಮಿಸಲ್ಪಟ್ಟ ಸಮಿತಿಯವರು ಕರ್ನಾಟಕ, ಮಹಾರಾಷ್ಟ್ರ, ಗುಜರಾಥ ಮತ್ತು ಸಿಂಧಗಳಿಗೆ ಪ್ರತ್ಯೇಕ ವಿಶ್ವವಿದ್ಯಾನಿಲಯಗಳು ಬೇಕೆಂದು ಅಭಿಪ್ರಾಯಪಟ್ಟರು. [illegible] ರಲ್ಲಿ ಮುಂಬಯಿ ಸಿನೇಟಿನವರು ಇದಕ್ಕೆ ಮನ್ನಣೆ ಕೊಟ್ಟರು. ಮುಂಬಯಿ ಸರಕಾರದವರು ಡಾ. ಜಯಕರರ ಅಧ್ಯಕ್ಷತೆಯಲ್ಲಿ ಮಹಾರಾಷ್ಟ್ರ ವಿಶ್ವವಿದ್ಯಾನಿಲಯ ಸಮಿತಿ ಸ್ಥಾಪಿಸಿ ಅದರ ವರದಿಯನ್ನು ಪ್ರಸಿದ್ಧಿಸಿದರು. ಇಷ್ಟರಲ್ಲಿಯೇ ಮಹಾರಾಷ್ಟ್ರ ವಿಶ್ವವಿದ್ಯಾನಿಲಯವು ಸ್ಥಾಪಿಸಲ್ಪಡುವದೂ ನಿಶ್ಚಿತ. ಈ ಪರಿಸ್ಥಿತಿಯಲ್ಲಿ ಕರ್ನಾಟಕಕ್ಕೆ ಸ್ವತಂತ್ರ ವಿಶ್ವವಿದ್ಯಾನಿಲಯವಿಲ್ಲದಿರುವುದು ನ್ಯಾಯ್ಯವಾಗಲಾರದು. ಕರ್ನಾಟಕದಲ್ಲಿ ಮೇಲೆ ಹೇಳಿದಂತೆ ಪ್ರತಿಕೂಲ ಪರಿಸ್ಥಿತಿಯ ಮೂಲಕ ಶಿಕ್ಷಣ ಪ್ರಗತಿಯಾಗಿಲ್ಲ. ಆದುದರಿಂದ ಮಾನ್ಯ ಮುಖ್ಯ ಮಂತ್ರಿಗಳು ಆಶ್ವಾಸಿಸಿದಂತೆ ಬೇಗನೆ ಕರ್ನಾಟಕ ವಿಶ್ವವಿದ್ಯಾನಿಲಯದತ್ತ ತಮ್ಮ ಲಕ್ಷ್ಯಗಮನಿಸಬೇಕೆಂದು ಬಿನ್ನವಿಸಿಕೊಳ್ಳುತ್ತೇವೆ.

## ಬೆಳಗಾವಿಯಲ್ಲಿ ಕನ್ನಡ-ಮರಾಠಿ

ಬೆಳಗಾವಿಗೆ ಮಾನ್ಯ ಮುಖ್ಯ ಮಂತ್ರಿಗಳು ಮತ್ತು ಆರೋಗ್ಯ ಮಂತ್ರಿಗಳು ಬಂದ ಕಾಲಕ್ಕೆ ಎದ್ದ ಕನ್ನಡ ಮರಾಠಿ ವಾದವು ವಿಕೋಪಕ್ಕೆ ಹೋದಂತೆ ತೋರುತ್ತದೆ. ಮರಾಠಿ ಮಾನಪತ್ರದ ಬಗ್ಗೆ ನಿಷೇಧ ಪ್ರದರ್ಶಿಸಿದ ಶ್ರೀ. ಅರವಿಂದ ಜೋಶಿಯವರನ್ನು ಮರಾಠಿಗರು ಥಳಿಸಿದ್ದಲ್ಲದೆ ಕನ್ನಡಿಗರನ್ನು ಬೆದರಿಸುತಿರುವರೆಂದೂ ಸುದ್ದಿ ಬಂದಿದೆ. ಅಲ್ಲದೆ ಹಲವು ಕನ್ನಡ ಕಾರ್ಯಕರ್ತರನ್ನು ಥಳಿಸಿದ ಸುದ್ದಿಯೂ ಬಂದಿದೆ. ಈ ಬಗೆಯ ಪುಂಡಾಟಿಕೆ ಯಾವ ರೀತಿಯಿಂದಲೂ ನ್ಯಾಯ್ಯವಾಗಲಾರದು. ಬೆಳಗಾವಿಯು ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಕಮೀಟಿಯ ಅಧೀನದಲ್ಲಿದ್ದುದರಿಂದ ಅಲ್ಲಿನ ಸಾರ್ವಜನಿಕ ಚಟುವಟಿಕೆಗಳೆಲ್ಲ ಪ್ರಾಂತಭಾಷೆಯಾದ ಕನ್ನಡದಲ್ಲಿಯೇ ನಡೆಯಬೇಕಾದುದು ನ್ಯಾಯ್ಯವು, ಶಿಷ್ಟಸಮ್ಮತವು. ಈ ಸಂಬಂಧದಲ್ಲಿ ಡಾ. ತೆರಗುಂಡಿ ಮತ್ತು ಶ್ರೀ ಕೇಶವರಾವ ಗೋಖಲೆಯವರು ಪ್ರಕಟನೆಗಳನ್ನು ಹೊರಡಿಸಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಶ್ರೀ ಗೋಖಲೆಯವರು ತಮ್ಮ ಪ್ರಕಟನೆಯಲ್ಲಿ ಹೊಸ ವಿಷಯವನ್ನೆತ್ತಿ ಕನ್ನಡ—ಮರಾಠಿ ವಾದ ಮತ್ತಷ್ಟು ಬೆಳೆಯಲು ಅವಕಾಶ ಕೊಟ್ಟಿದ್ದಾರೆಂದು ವಿಷಾದದಿಂದ ಹೇಳಬೇಕಾಗುತ್ತದೆ. ಕನ್ನಡಿಗರು ಅನುಕೂಲ ಸಮಯ ನೋಡಿ ಈ ವಾದವನ್ನೆಬ್ಬಿಸುತಿರುವರಂತೆ. ಶ್ರೀ ಗೋಖಲೆಯವರ ಈ ವಿಚಾರಸರಣಿ ತಪ್ಪಾದುದೆಂದು ಹೇಳಬೇಕಾಗಿದೆ. ಬೆಳಗಾವಿಯ ಕನ್ನಡಿಗರು ಅಲ್ಲಿ ಮರಾಠಿಗರ ಚಂಚುಪ್ರವೇಶಕ್ಕೆ ಎಂದಿನಿಂದಲೂ ವಿರೋಧಿಸುತ್ತ ಬಂದಿರುವರು. ಕೆಲ ಸಂದರ್ಭಗಳಲ್ಲಿ ಪ್ರತ್ಯಕ್ಷ ವಿರೋಧ ಮಾಡಿರದಿದ್ದರೆ ಕನ್ನಡಿಗರು ತಮ್ಮ ಹಕ್ಕನ್ನು ಬಿಟ್ಟುಗೊಟ್ಟಂತಾಗಲಾರದು. ಬಳ್ಳಾರಿಯಂತೆ ಬೆಳಗಾವಿಯ ಗಡಿ ನಿರ್ಣಯವನ್ನು ಮಾಡಿಲ್ಲೆಂದೂ ಅದುದರಿಂದ ಹಾಗಾಗುವವರೆಗೆ ಕನ್ನಡ ಮರಾಠಿ ವಾದ ತಪ್ಪಿದ್ದಲ್ಲೆಂದೂ ಶ್ರೀ ಗೋಖಲೆಯವರ ಹೇಳಿಕೆ. ಬಳ್ಳಾರಿಯಂತೆ ಬೆಳಗಾವಿಯ ಸಂಬಂಧದಲ್ಲಿ ಮತಭೇದವಿದ್ದರೆ ಕಾಂಗ್ರೆಸ್ಸಿನವರು ಗಡಿ ನಿರ್ಣಯ ಸಮಿತಿಯನ್ನು ನಿಯಮಿಸಬಹುದಾಗಿತ್ತು. ಆದರೆ ಆ ಬಗೆಯ ಸಂಶಯ ಕಾಂಗ್ರೆಸ್ಸಿನವರಿಗೆ ಮತ್ತು ಆಗಿನ ಕರ್ನಾಟಕ ಕಾಂಗ್ರೆಸ್ ಮುಖಂಡರಿಗೆ ಬಾರದ್ದರಿಂದಲೆ ಬೆಳಗಾವಿ ಜಿಲ್ಲೆಯನ್ನು ಕರ್ನಾಟಕ ಪ್ರಾಂತದಲ್ಲಿ ಸೇರಿಸಿದರು. ಇಲ್ಲದಿದ್ದರೆ ಮರಾಠಿ ಮಾತೃಭಾಷೆಯಾಗಿದ್ದ ಕರ್ನಾಟಕದ ಮುಖಂಡರು ಇದಕ್ಕೆ ಎಂದಿಗೂ ಒಪ್ಪುತಿರಲಿಲ್ಲ. ಪರಿಸ್ಥಿತಿ ಹೀಗಿರುವಾಗ ಶ್ರೀ ಕೇಶವರಾಯರಂಥವರು ಇಲ್ಲದಿದ್ದ ವಾದವನ್ನೆಬ್ಬಿಸುವದು ಸರಿಯಲ್ಲ. ಒಂದು ವೇಳೆ ಬೆಳಗಾವಿ ಜಿಲ್ಲೆಯ ಕೆಲ ಭಾಗ ಮಹಾರಾಷ್ಟ್ರ ಪ್ರಾಂತದಲ್ಲಿ ಸೇರಬೇಕೆಂದು ಹಲವರು ಬಯಸುತಿದ್ದರೆ ಗಡಿ ನಿರ್ಣಯದ ಕಾಲಕ್ಕೆ ಸಾಕ್ಷಿ ಪುರಾವೆಗಳೊಂದಿಗೆ ಅದನ್ನು ಸಿದ್ಧ ಮಾಡಬಹುದು. ಅಲ್ಲಿಯವರೆಗೆ ಈ ಬಗೆಯ ಪುಂಡಾಟಿಕೆಗೆ ಅವಕಾಶ ಕೊಡುವದು ಯಾವ ರೀತಿಯಿಂದಲೂ ನ್ಯಾಯ್ಯವಾಗಲಾರದು. ಶ್ರೀ ಕೇಶವರಾಯರು ಈ ಪುಂಡಾಟಿಕೆಯನ್ನು ನಿಷೇಧಿಸಿದ್ದು ಸ್ತುತ್ಯವಾಗಿದೆ. ಇಂಥ ಪುಂಡಾಟಿಕೆಯಿಂದ ಮರಾಟಿಗರಾಗಲಿ ಕನ್ನಡಿಗರಾಗಲಿ ತಮ್ಮ ಹಕ್ಕನ್ನು ಪ್ರಸ್ಥಾಪಿಸಲಾರರು. ಆದುದರಿಂದ ಬೆಳಗಾವಿಯ ಮರಾಠಿಗರು ಮತ್ತು ಮರಾಠಿಯ ಬಗ್ಗೆ ಮೋಹವಿದ್ದವರು ಶಾಂತ ಮತ್ತು ನಿರ್ವಿಕಾರ ಚಿತ್ತದಿಂದ ಪರಿಸ್ಥಿತಿಯನ್ನು ವಿಮರ್ಶಿಸಿ ಸಮಂಜಸ ಧೋರಣ ಸ್ವೀಕರಿಸಬೇಕೆಂದು ಸೂಚಿಸಬಯಸುತ್ತೇವೆ.

## ಸಂಪಾದಕೀಯ * * * * * * *

# ಟೀಕೆ-ಟಿಪ್ಪಣೆಗಳು

## ಸಾಂಗಲಿಯಲ್ಲಿ ಹೊಸ ಸುಧಾರಣೆ

ಸಾಂಗಲಿಯ ರಾಜೇಸಾಹೇಬರು ವಿಜಯದಶಮಿಯ ಶುಭ ಮುಹೂರ್ತದಲ್ಲಿ ಹೊಸ ಸುಧಾರಣೆಗಳನ್ನು ಘೋಷಿಸಿ ಪ್ರಜೆಗಳಿಗೆ ಹೆಚ್ಚಿನ ಹಕ್ಕುಬಾಧ್ಯತೆಗಳನ್ನು ಕೊಟ್ಟಿರುವರು. ಔಂಧ ಮತ್ತು ಫಲ್ಟಣ ರಾಜೇಸಾಹೇಬರ ತರುವಾಯ ಸಾಂಗಲಿ ಸರಕಾರದವರೆ ಇಂತು ಹೆಚ್ಚಿನ ಹಕ್ಕು ಪ್ರಜೆಗಳಿಗೆ ಕೊಡಲು ಸಿದ್ಧರಾದುದು ಅಭಿನಂದನೀಯವಾಗಿದೆ. ಜಗತ್ತಿನಲ್ಲೆಲ್ಲ ಈಗ ಸ್ವಾತಂತ್ರ್ಯದ ಗಾಳಿ ಬೀಸುತಿದೆ. ಸಂಸ್ಥಾನ ಪ್ರಜೆಗಳಾದರೂ ಅದರಿಂದ ದೂರ ಉಳಿಯರು. ಅವರಾದರೂ ಸ್ವಾತಂತ್ರ್ಯಕ್ಕಾಗಿ ಹಂಬಲಿಸುವದು ಸ್ವಾಭಾವಿಕ. ಅಂತೆಯೇ ಸಂಸ್ಥಾನಗಳಲ್ಲೆಲ್ಲ ಹೊಣೆಗಾರ ರಾಜ್ಯಪದ್ಧತಿಯನ್ನು ಪ್ರಾರಂಭಿಸಿರೆಂದು ಪ್ರಜೆಗಳು ಬೇಡುತಿರುವರು. ಆದರೆ ವಂಶಪರಂಪರಾಗತ ನಿರಂಕುಶ ಆಡಳಿತ ಸಾಗಿಸಿದ್ದುದರಿಂದ ಸಂಸ್ಥಾನಿಕರು ಅಧಿಕಾರವನ್ನು ಒಮ್ಮೆಲೆ ಬಿಟ್ಟುಗೊಡಲು ಸಿದ್ಧರಾಗುವುದು ದುಸ್ತರ. ಆದರೆ ಸದ್ಯದ ಪರಿಸ್ಥಿತಿಯಲ್ಲಿ ಅವರು ತೀರ ಒಂಟಿ ಹಿಡಿತವನ್ನು ಹಿಡಿಯಲು ಪ್ರಯತ್ನಿಸಿದರೆ ಸಂಸ್ಥಾನಗಳನ್ನು ನಿರ್ಮೂಲ ಮಾಡಬೇಕೆಂಬ ಚಳವಳಿಗೇ ಬೆಂಬಲ ದೊರೆಯುವುದೆಂಬಲ್ಲಿ ಸಂದೇಹವಿಲ್ಲ. ಇದನ್ನು ಸಂಸ್ಥಾನಿಕರು ಮನಗಂಡಿದ್ದರಿಂದ ಹೆಚ್ಚೆಚ್ಚು ಹಕ್ಕುಬಾಧ್ಯತೆಗಳನ್ನು ಕೊಡಲು ಅವರು ಉಪಕ್ರಮಿಸಿರುವರು. ಸಾಂಗಲಿ ರಾಜೇಸಾಹೇಬರು ಈಗ ೧೯೩೫ನೇ ಇಸ್ವಿಯ ಹಿಂದುಸ್ತಾನ ಸರಕಾರದ ಘಟನೆಯ ಮೇರೆಗೆ ಬ್ರಿಟಿಶ್ ಹಿಂದುಸ್ತಾನದ ಪ್ರಾಂತಗಳಲ್ಲಿಯ ಮಂತ್ರಿಗಳ ಅಧಿಕಾರಕ್ಕೊಳಗಾದ ಆಡಳಿತದ ಶಾಖೆಗಳಷ್ಟೆ ಶಾಖೆಗಳನ್ನು ತಮ್ಮ ಸಂಸ್ಥಾನದಲ್ಲಿಯೂ ಲೋಕನಿಯುಕ್ತ ಮಂತ್ರಿಗಳ ಕಡೆಗೆ ಒಪ್ಪಿಸುವದಾಗಿ ಘೋಷಿಸಿರುವರು. ಅಲ್ಲದೆ ಸಂಸ್ಥಾನ ಶಾಸನ ಸಭೆಯ ಅಧ್ಯಕ್ಷ ಉಪಾಧ್ಯಕ್ಷರನ್ನು ಸದಸ್ಯರೇ ಆರಿಸಿಕೊಳ್ಳುವಂತೆ ಯೋಜಿಸಿರುವರು. ಸರಕಾರದ ಪರವಾಗಿ ಶಾಸನ ಸಭೆಗೆ ಯಾರನ್ನು ನಾಮಕರಣ ಮಾಡಲಾಗುವದಿಲ್ಲೆಂದು ಸಾರಿದ್ದಾರೆ. ಇವೆಲ್ಲ ಘೋಷಣೆ ತಾತ್ಪೂರ್ತಿಕವಾಗಿದ್ದು ಬೇಗನೆ ಘಟನಾ ಸಮಿತಿಯನ್ನು ನಿಯಮಿಸಿ ಹೊಸ ಘಟನೆಯನ್ನು ಸಿದ್ಧಪಡಿಸುವದಾಗಿಯೂ ಸಾರಿರುವರು. ರಾಜೇಸಾಹೇಬರು ತಾವು ಘೋಷಿಸಿದಂತೆ ಪ್ರಜಾಪಕ್ಷದ ಧುರೀಣರಿಗೆ ಮಂತ್ರಿಮಂಡಳ ರಚಿಸಲು ಆಹ್ವಾನಿಸಿರುವರು. ಪ್ರಜಾ ಪರಿಷತ್ತಿನವರು ತಮ್ಮಲ್ಲಿಯ ಮತಭೇದ ಮುಂತಾದ್ದನ್ನು ಬದಿಗಿರಿಸಿ ರಾಜೇಸಾಹೇಬರು ಕೊಟ್ಟ ಸುಧಾರಣೆಗಳಿಗೆ ತಾವು ಪಾತ್ರರಿರುವುದಾಗಿ ಕೃತಿಯಿಂದ ಸಿದ್ಧಮಾಡಿ ತೋರಿಸಬೇಕು. ರಾಜೇಸಾಹೇಬರಾದರೂ ಇನ್ನಷ್ಟು ಉದಾರ ಧೋರಣ ವಹಿಸಿ ತಾವು ಈಗ ಕಾಯ್ದಿಟ್ಟುಕೊಂಡಿದ್ದ ವಿದೇಶ ಹಾಗು ರಾಜಕೀಯ ಸಂಬಂಧ, ಸರಂಜಾಮು ಹಾಗು ಇನಾಮು ರಾಜಮನೆತನದ ಖಾಸಗಿ ವ್ಯವಹಾರ, ದೇವಸ್ಥಾನ ಮೊದಲಾದ ವಿಷಯಗಳನ್ನೂ ಪ್ರಜೆಗಳಿಗೆ ಒಪ್ಪಿಸಿಕೊಡುವದುಚಿತವಾಗಿದೆ. ಮೇಲೆ ಹೇಳಿದಂತೆ ಪ್ರಜೆಗಳು ಹೊಣೆಗಾರಿಕೆಯಿಂದ ತಮ್ಮ ಹಕ್ಕು ಬಾಧ್ಯತೆಗಳ ಉಪಯೋಗ ಮಾಡಿ ತಾವು ಈ ಹೊಸ ಸುಧಾರಣೆಗೆ ಪಾತ್ರರಿರುವುದಾಗಿ ಸಿದ್ಧ ಮಾಡಿ ತೋರಿಸಬೇಕು.

## ಮದ್ಯಪಾನ ಪ್ರತಿಬಂಧ

ಇದೆ ಅಕ್ಟೋಬರ ೧ ರಿಂದ ಮದ್ರಾಸ ಪ್ರಾಂತದ ೮ ಜಿಲ್ಲೆಗಳಲ್ಲಿ ಸಂಪೂರ್ಣ ಮದ್ಯಪಾನ ಪ್ರತಿಬಂಧದ ಕಾರ್ಯಕ್ರಮ ಜಾರಿಯಲ್ಲಿ ಬಂದಿದೆ. ಮದ್ಯಪಾನ ಪ್ರತಿಬಂಧಕ್ಕೆ ಕಾಂಗ್ರೆಸಿನ ವಿಧಾಯಕ ಕಾರ್ಯಕ್ರಮದಲ್ಲಿ ಮಹತ್ವದ ಸ್ಥಾನವಿದ್ದುದರಿಂದ ಕಾಂಗ್ರೆಸ ಮಂತ್ರಿಗಳು ತಮ್ಮ ತಮ್ಮ ಪ್ರಾಂತಗಳಲ್ಲಿ ಅದನ್ನು ಜಾರಿಯಲ್ಲಿ ತರಲು ಬದ್ಧರಾಗಿರುವರು. ಅನುಕೂಲ ಪರಿಸ್ಥಿತಿ ನೋಡಿಕೊಂಡು ಆಯಾ ಪ್ರಾಂತದವರು ಈ ಉಪಕ್ರಮ ಕೈಕೊಳ್ಳಲಿರುವರು. ಮದ್ರಾಸ ಪ್ರಾಂತದವರು ಉಳಿದ ಪ್ರಾಂತಗಳಿಗಿಂತ ಈ ದಿಸೆಯಲ್ಲಿ ಮುಂದಾದುದು ಅಭಿನಂದನೀಯವಾಗಿದೆ. ೧೯೩೭ ರಲ್ಲಿ ರಾಜಾಜಿ ಮಂತ್ರಿಮಂಡಳ ಅಸ್ತಿತ್ವದಲ್ಲಿರುವಾಗಲೆ ಪ್ರಾಂತದ ನಾಲ್ಕು ಜಿಲ್ಲೆಗಳಲ್ಲಿ ಮದ್ಯಪಾನವನ್ನು ಯಶಸ್ವಿಯಾಗಿ ಪ್ರತಿಬಂಧಿಸಿ ಮದ್ರಾಸ ಪ್ರಾಂತ ಉಳಿದ ಪ್ರಾಂತಗಳಿಗೆ ಮಾರ್ಗದರ್ಶಕವಾಗಿತ್ತು. ಆದರೆ ಮುಂದೆ ಎರಡು ವರ್ಷಗಳಲ್ಲಿಯೆ ಸಲಹೆಗಾರ ಸರಕಾರ ಸ್ಥಾಪಿತವಾದ್ದರಿಂದ ಮದ್ಯಪಾನಕ್ಕೆ ಮತ್ತೆ ಅವಕಾಶ ಸಿಕ್ಕಿತು. ಹಿಂದೆ ಮಾಡಿದ ಪ್ರಯತ್ನವೆಲ್ಲ ನಿರರ್ಥಕವಾಯಿತು. ಆದರೀಗ ಮತ್ತೆ ಕಾಂಗ್ರೆಸ ಮಂತ್ರಿಮಂಡಳ ಸ್ಥಾಪಿತವಾದ್ದರಿಂದ ಸರಕಾರದವರು ಮೊದಲಿನ ನಾಲ್ಕು ಜಿಲ್ಲೆಗಳಲ್ಲಲ್ಲದೆ ಹೊಸದಾಗಿ ಮತ್ತೆ ನಾಲ್ಕು ಜಿಲ್ಲೆಗಳಲ್ಲಿ ಮದ್ಯಪಾನವನ್ನು ಪ್ರತಿಬಂಧಿಸಿರುವರು. ಮದ್ಯಪಾನ ಪ್ರತಿಬಂಧ ಯೋಜನೆಯಿಂದ ಕೊಟಿಗಟ್ಟಲೆ ರೂಪಾಯಿಗಳನ್ನು ಸರಕಾರ ಕಳೆದುಕೊಳ್ಳಬೇಕಾಗುವುದೆಂಬುದು ಸರ್ವಶ್ರುತ. ಆದರೂ ಜನತೆಯಲ್ಲಿ ಹಬ್ಬಿದ ಈ ದುಷ್ಟ ಚಟವನ್ನು ನಿರ್ಮೂಲ ಮಾಡಲು ಕಾಂಗ್ರೆಸ ಸರಕಾರ ಸಿದ್ಧವಾಗಿದೆ. ಈ ಪರಿಸ್ಥಿತಿಯಲ್ಲಿ ಜನತೆ ಅವರಿಗೆ ಸಂಪೂರ್ಣ ಸಹಾಯ ಕೊಡಬೇಕು. ಈ ಯೋಜನೆಯನ್ನು ಯಶಸ್ವಿ ಮಾಡಬೇಕಾಗಿದೆ. ಆಯಾ ಜಿಲ್ಲೆಗಳ ಗಡಿಯಲ್ಲಿದ್ದ ಸಂಸ್ಥಾನ ಸರಕಾರಗಳೂ ತಮ್ಮಲ್ಲಿ ಮದ್ಯಪಾನ ಪ್ರತಿಬಂಧಿಸಿ ಮದ್ರಾಸ ಸರಕಾರದ ಈ ಸ್ತುತ್ಯ ಉಪಕ್ರಮಕ್ಕೆ ಬೆಂಬಲ ಕೊಡಬೇಕೆಂದು ಸೂಚಿಸುತ್ತೇವೆ.

## ಜಾಗತಿಕ ಶಾಂತಿ

ಜಾಗತಿಕ ಶಾಂತಿಪ್ರಸ್ಥಾಪನೆಗಾಗಿ ಜಗತ್ತಿನಲ್ಲಿಯ ಪ್ರಬಲ ರಾಷ್ಟ್ರಗಳು ಸಭೆ ಸೇರಿ ವಿಚಾರ ವಿನಿಮಯ ನಡೆಸಿವೆ. ಆಯಾ ರಾಷ್ಟ್ರ ಮುಖಂಡರು ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಹತ್ತಿದ್ದಾರೆ. ಬ್ರಿಟಿಶ್ ಪರರಾಷ್ಟ್ರ ಮಂತ್ರಿಗಳಾದ ಬೆವಿನ್‌ರು ಶಾಂತಿ ಪರಿಷತ್ತಿನಲ್ಲಿ ಭಾಷಣ ಮಾಡುತ್ತ ಜಾಗತಿಕ ಶಾಂತಿಗೆ ಐಕ್ಯವೆ ತಳಹದಿಯಾಗಲೆಂದು ಹಾರೈಸಿದ್ದಾರೆ. ವಿಜಯಕ್ಕೆ ಐಕ್ಯ ತಳಹದಿಯಾಗಿದ್ದಂತೆ ಜಾಗತಿಕ ಶಾಂತಿಗೂ ಅದೇ ತಳಹದಿಯಾಗಿರಬೇಕೆಂದು ಅವರ ಹಾರೈಕೆ. ಆದರೆ ಈ ಐಕ್ಯ ಸಾಧ್ಯವಾಗಬೇಕಾದರೆ ಆಯಾ ರಾಷ್ಟ್ರಗಳವರು ಸಾಮ್ರಾಜ್ಯತ್ವದ, ಸುಲಿಗೆಯ, ಪ್ರಭುತ್ವದ ಮೋಹವನ್ನು ಬಿಟ್ಟುಗೊಡಬೇಕು. ಬಿಳಿಯರು ಕರಿಯರೆಂಬ ಭೇದವನ್ನು ತೊಡೆದುಹಾಕಬೇಕು. ಎಲ್ಲರೂ ಸಮಾನರು ಎಲ್ಲ ರಾಷ್ಟ್ರಗಳಿಗೂ ಸಮಾನ ಹಕ್ಕುಬಾಧ್ಯತೆಗಳಿವೆ, ಒಬ್ಬರನ್ನಿನ್ನೊಬ್ಬರು ಆಳಬಾರದು, ಸುಲಿಯಬಾರದು ಮುಂತಾದ ಧೋರಣವಿಟ್ಟುಕೊಂಡು ಆಯಾ ರಾಷ್ಟ್ರಗಳು ವಿಶೇಷತಃ ಪ್ರಬಲ ರಾಷ್ಟ್ರಗಳು ನಡೆದದ್ದಾದರೆ ಬೆವಿನ್ನರು ಬಯಸಿದ ಜಾಗತಿಕ ಐಕ್ಯ ಶಾಂತಿ ಸಾಧ್ಯವಾಗಬಹುದು. ಜಾಗತಿಕ ಐಕ್ಯ ಶಾಂತಿ ಎಂದು ಬಾಯಿಂದ ಜಪಿಸುತ್ತ ಶೋಷಣೆಯ, ಪ್ರಭುತ್ವದ ಧೋರಣ ವಹಿಸಿದರೆ ಉದ್ದಿಷ್ಟವೆಂದಿಗೂ ಸಾಧ್ಯವಾಗಲಾರದು. ಈ ಮಾತನ್ನು ಮನದಂದು ಪ್ರಬಲ ರಾಷ್ಟ್ರಗಳು ತಮ್ಮ ಧೋರಣವನ್ನು ಬದಲಿಸಿಕೊಂಡದ್ದಾದರೆ ಜಾಗತಿಕ ಐಕ್ಯ ಶಾಂತಿ ಬೇಗ ಪ್ರಸ್ಥಾಪಿತವಾಗಬಲ್ಲುವು.

## ಚರ್ಚಿಲ್ಲರ ಘೂತ್ಕಾರ

ಬ್ರಿಟನ್‌ದ ಹಿಂದಿನ ಮುಖ್ಯ ಮಂತ್ರಿಗಳೂ ಕಾಂಜರ್ವೇಟಿವ್ ಪಕ್ಷದ ಧುರೀಣರೂ ಆಗಿರುವ ವಿನ್‌ಸ್ಟನ್ ಚರ್ಚಿಲ್ಲರು ಬ್ಲ್ಯಾಕಪೂಲದಲ್ಲಿ ಕೂಡಿದ ತಮ್ಮ ಪಕ್ಷದ ಸಭೆಯಲ್ಲಿ ಮಾತಾಡುತ್ತ ಹಿಂದುಸ್ತಾನದ ಬಗ್ಗೆ ಅಪಪ್ರಚಾರ ಮಾಡಿರುವರು. ಅವರ ಭಾಷಣದ ಮುಖ್ಯಾಂಶ ಅದಕ್ಕೆ ಹಿಂದುಸ್ತಾನದ ಪ್ರಮುಖರಾದ ಪಂಡಿತ ಜವಾಹರಲಾಲರು ಕೊಟ್ಟ ಖಂಡತುಂಡ ಉತ್ತರ ಮುಂತಾದ್ದನ್ನೆಲ್ಲ ಇದೇ ಸಂಚಿಕೆಯಲ್ಲಿ ಬೇರೆ ಕಡೆ ಕೊಟ್ಟಿದ್ದೇವೆ. ಹಿಂದುಸ್ತಾನಕ್ಕೆ ನ್ಯಾಯ್ಯವಾದ ಹಕ್ಕುಬಾಧ್ಯತೆಗಳನ್ನು ಕೊಡಲು ಬ್ರಿಟಿಶ್ ಕೂಲಿಕಾರ ಸರಕಾರ ಮುಂದಾದುದಕ್ಕಾಗಿ ಕಾಂಜರ್ವೇಟಿವ್ ಪಕ್ಷದವರಿಗೆ ವಿಶೇಷತಃ ಚರ್ಚಿಲ್ಲರಂಥವರಿಗೆ ವಿಶೇಷ ವ್ಯಥೆಯಾಗಿದೆ. ಸ್ವಚ್ಛಂದ ಮೇಯಲು ಹುಲ್ಲುಗಾವಲಿನಂತಿದ್ದ ಹಿಂದುಸ್ತಾನವಿಂದು ಕೈಬಿಡುತಿದೆಯೆಲ್ಲ ಎಂದು ಅವರ ಹೊಟ್ಟೆಯಲ್ಲಿ ಉರಿ. ಅಖಂಡ ಇನ್ನೂರು ವರ್ಷಗಳ ವರೆಗೆ ತಮ್ಮ ಶೋಷಣೆಗೆ ಬಲಿಯಾದ ಹಿಂದುಸ್ತಾನವೀಗ ಸ್ವತಂತ್ರವಾಗುವುದರಿಂದ ಮುಂದೇನು ಗತಿಯೆಂದು ಅವರ ಕಿಚ್ಚು. ಅಂತೆಯೇ ಇಲ್ಲದ್ದೊಂದು ನೆವ ಮುಂದೆ ಮಾಡಿ ಕೂಲಿಕಾರ ಸರಕಾರದ ಮಾರ್ಗದಲ್ಲಿ ಅಡ್ಡಗಾಲು ಹೊಡೆಯುತಿರುವರು. ಹಿಂದುಸ್ತಾನದಲ್ಲಿ ಸದ್ಯದಂಥ ಅಲ್ಪಸಂಖ್ಯಾಕ ಪಕ್ಷದ ಕೈಯಲ್ಲಿ ಆಡಳಿತಾಧಿಕಾರ ಕೊಟ್ಟರೆ ವಿಪತ್ತಿಗೆ ಗುರಿಯಾಗದೆ ಬಿಡದೆಂದು ಅವರ ಅಭಿಪ್ರಾಯ. ಅಲ್ಲದೆ ಹಿಂದುಸ್ತಾನ ಬೇಗನೆ ಸ್ವತಂತ್ರ ರಾಷ್ಟ್ರವಾದರೆ ಬ್ರಿಟನ್‌ದೊಡನೆ ಮಿತ್ರತ್ವದಿಂದ ಇರಲಿಕ್ಕಿಲ್ಲೆಂಬ ಭೀತಿ ಅವರಿಗೆ. ಜಾತೀಯ ದಂಗೆಗಳನ್ನು ಹತ್ತಿಕ್ಕಲು ಬ್ರಿಟಿಶ್ ಸೈನ್ಯದ ಉಪಯೋಗ ಮಾಡಿಕೊಳ್ಳಬೇಕೆಂದು ಬಗೆದಿದ್ದುದೆ

—೧೮ನೇ ಪುಟಕ್ಕೆ

# ದಿಲ್ಲಿಯಲ್ಲಿ ಕಾಂಗ್ರೆಸ್ ಲೀಗ್ ಸಂಧಾನಕ್ಕೆ ಯಶಸ್ಸು?

### ಮುಚ್ಚು ಬಾಗಿಲ ಮಾತುಕತೆ

ಹೊಸದಿಲ್ಲಿಯಲ್ಲಿ ಈಗೆರಡು ವಾರಕ್ಕೂ ಮಿಕ್ಕಿ ಗಹನವಾದ ಮಾತುಕತೆಗಳು ಅತ್ಯಂತ ರಹಸ್ಯವಾಗಿ ಜರಗುತ್ತಿವೆ. ಹಿಂದುಸ್ತಾನದ — ಹಿಂದೂ ಮುಸ್ಲಿಂ ಎರಡೂ ಜಾತಿಗಳ — ಭಾಗ್ಯ ವಿಧಾತರೆಲ್ಲ ಅಲ್ಲಿ ತಳವೂರಿರುವರೆಂದು ಹೇಳಬೇಕು. ಕಾಂಗ್ರೆಸ್ ಕಾರ್ಯ ಸಮಿತಿಯು ತಿರುಳೆಲ್ಲ ನಡುಗಾಲ ಸರಕಾರದಲ್ಲಿ ಸೇರಿಕೊಂಡಿರುವದರಿಂದ ಅದರ ಮುಂದಾಳುಗಳು ಅಲ್ಲಿದ್ದಾರೆಂದು ಹೇಳುವ ಕಾರಣವೇ ಇಲ್ಲ. ಗಾಂಧೀಜಿಯವರು ಭಂಗಿ ವಸತಿಯಲ್ಲಿ– ವಾಲ್ಮೀಕಿ ಅಶ್ರಮದಲ್ಲಿ— ವಸತಿಯನ್ನು ಬೆಳಸಿ ಸೇವಾಗ್ರಾಮದ ಪಯಣವನ್ನು ಮುಂದೆ ಹಾಕಿದ್ದಾರೆ. ಜಿನ್ನಾ ಸಾಹೇಬರೂ ಅವರ ಕ್ರಿಯಾಸಮಿತಿ ಕಾರ್ಯಸಮಿತಿಗಳೂ ಅಲ್ಲೇ ಇದ್ದು ಬೇಕಾದಾಗ ಕೂಡಿ ವಿಚಾರ ಮಾಡಲು ನಿಲುಕುವಂತೆ ಇವೆ. ಜಿನ್ನಾ–ವಾಯಿಸರಾಯರ ಭೆಟ್ಟಿಗಳೊಡನೆ ಪ್ರಾರಂಭವಾದ ರಾಜಕೀಯ ಮಾತುಕತೆಗಳು, ಅವುಗಳ ಕೊನೆಯ ಫಲಿತಾಂಶ ಹೇಗೇ ಆಗಲಿ, ಈಗ ಬಹಳ ದೂರ ಸಾಗಿವೆಂಯೆಂದು ಹೇಳಲು ಯಾವ. ಆತಂಕವೂ ಇಲ್ಲ. ಈ ಮಾತುಕತೆಗಳಲ್ಲಿ ಭೋಪಾಲದ ನವಾಬರು ಪ್ರಮುಖ ಪಾತ್ರವಹಿಸಿದ್ದಾರೆ. ಅವರು ವಾಯಿಸರಾಯರನ್ನೂ ಮಹಾತ್ಮರನ್ನೂ ಜಿನ್ನಾರನ್ನೂ ಈ ಎರಡು ವಾರಗಳಲ್ಲಿ ಲೆಕ್ಕವಿಲ್ಲದಷ್ಟು ಸಲ ಭೆಟ್ಟಿಯಾಗಿ ಮೂರು ಪಕ್ಷಗಳ ನಡುವೆ ದೌತ್ಯವನ್ನು ಮಾಡಿದರು. ಅವರ ಅವಿಶ್ರಾಂತ ಪರಿಶ್ರಮದ ಫಲವಾಗಿ ಕಾಂಗ್ರೆಸ್ ಲೀಗುಗಳ ನಡುವೆ ಇದ್ದ ಮುಚ್ಚಲಾಗದೆಂಬಂಥ ಅಂತರಾಳ ಬಹಳಮಟ್ಟಿಗೆ ಮಾಯವಾಗಿರಬೇಕು. ಎರಡೂ ಪಕ್ಷಗಳು ಒಂದು ಸಮಾನ ನೆಲೆಯನ್ನು ಕಂಡು ಕಾಂಗ್ರೆಸ್ ಅಧ್ಯಕ್ಷರಾದ ಪಂಡಿತ ಜವಾಹರಲಾಲರಿಗೂ ಲೀಗ್ ಅಧ್ಯಕ್ಷ ಜಿನ್ನಾ ಸಾಹೇಬರಿಗೂ ಭೆಟ್ಟಿ ಏರ್ಪಟ್ಟಿತು. ಕಳೆದ ವಾರದ ಅಂತ್ಯದಲ್ಲಿ ಪರಿಸ್ಥಿತಿ ಎಷ್ಟು ಆಶಾಜನಕ ಮಟ್ಟಕ್ಕೆ ಮುಟ್ಟಿತ್ತೆಂದರೆ, ಸೋಮವಾರ (ತಾ ೭) ಸೇರುವ ಲೀಗ್ ಕಾರ್ಯಸಮಿತಿಯ ಸಭೆಯಲ್ಲಿ, ಲೀಗು ನಡುಗಾಲ ಸರಕಾರದಲ್ಲಿ ಭಾಗವಹಿಸುವ ನಿರ್ಣಯಕ್ಕೆ ಬರುವದೆಂದು ಕೂಡ ನಿರೀಕ್ಷಿಸಲಾಗಿತ್ತು. ಆದರೆ ಅಲ್ಲಿಂದೀಚೆಗೆ ವಾತಾವರಣದಲ್ಲಿದ್ದ ಆಶೆ ತುಸು ಇಳಿದಿದೆ. ಎಲ್ಲಿಯೋ ಏನೋ ಒಂದು ತೊಡಕು ಹುಟ್ಟಿಕೊಂಡು ಕಲಮಲವೆಬ್ಬಿಸಿದೆಯೆಂದೂ ಈವಾರದ ಕೊನೆಯವರೆಗೂ ನಿಶ್ಚಯಾತ್ಮಕ ನಿರ್ಣಯ ಹೊರಬೀಳುವ ಸಂಭವವಿಲ್ಲವೆಂದೂ ನಂಬಲಾಗಿದೆ. ಎಲ್ಲ ಮಾತುಕತೆಗಳು ಮುಚ್ಚಿದ ಬಾಗಿಲಿನಲ್ಲಿ ನಡೆಯುತಿರುವದರಿಂದ ತೊಡಕಿನ ಮೂಲವಾಗಲಿ ಒಪ್ಪಂದದ ಸ್ವರೂಪವಾಗಲಿ ನಿರ್ದಿಷ್ಟವಾಗಿ ತಿಳಿಯುವಂತಿಲ್ಲವಾಗಿದೆ. ಆದರೆ ಮೊನ್ನೆ ಮಂಗಳವಾರ ಪ್ರಾರ್ಥನಾ ಕಾಲದಲ್ಲಿ ಗಾಂಧೀಜಿಯವರು ಕಾಂಗ್ರೆಸ್—ಲೀಗ್ ಒಡಂಬಡಿಕೆಯಾಗುವ ವಿಷಯದಲ್ಲಿ ಆಶಾವಚನಗಳನ್ನಾಡಿ ಈ ಬಾರಿಯ ಐಕ್ಯ ೧೯೧೬ ರಲ್ಲಿನ ಮತ್ತು ಖಿಲಾಫತ ಚಳವಳಿಯ ಕಾಲದ ಐಕ್ಯಕ್ಕಿಂತಲೂ ಬಲಿಷ್ಠವಾಗಿರಲೆಂದು ಹಾರೈಸಿದ್ದರಿಂದ ಉತ್ಪನ್ನವಾಗಿರುವ ತೊಡಕು ಅಷ್ಟು ಮಹತ್ವದ್ದಲ್ಲವೆಂದೂ ಅದರ ನಿವಾರಣೆ ಕೇವಲ ದಿನಗಳ ಮಾತೆಂದೂ ನಂಬಲು ಕಾರಣವಿದೆ.

### ಮೂಲ ತತ್ವಗಳನ್ನು ಸಡಿಲು ಬಿಡುವದಿಲ್ಲ

ಲೀಗು ಬ್ರಿಟಿಶ ಮಂತ್ರಿಮಂಡಲದ ಯೋಜನೆಯನ್ನು ತಿರಸ್ಕರಿಸಿದಾಗ ಕಾಂಗ್ರೆಸ್ ಲೀಗುಗಳಲ್ಲಿರುವ ಅಂತರ ಅತ್ಯಂತ ಮೂಲಭೂತವಾಗಿದೆಯೆಂಬಂತಿತ್ತು. ಲೀಗು ನಡುಗಾಲ ಸರಕಾರದಲ್ಲಿ ಸೇರಲು ಇರುವ ಮುಖ್ಯ ಆತಂಕಗಳು ಹೀಗಿದ್ದವು: ೧ ರಾಷ್ಟ್ರೀಯ ಮುಸ್ಲಿಮನಿಗೆ ಕಾಂಗ್ರೆಸ ಪಾಲಿನ ೬ ಸ್ಥಾನಗಳಲ್ಲಿ ಒಂದನ್ನೀಯಲು ಲೀಗಿನ ವಿರೋಧ, ೨. ಜಾತೀಯ ವಿಷಯಗಳಲ್ಲಿ ನಿರ್ಣಯವಾಗಬೇಕಾದರೆ ಮುಸ್ಲಿಂ ಸದಸ್ಯರಲ್ಲಿ ಬಹುಮತದ ಬೆಂಬಲವಿರಬೇಕೆಂಬ ಹಟ, ೩. ಪಂಡಿತ ಜವಾಹರಲಾಲರು ಕೇಂದ್ರ ಮಂತ್ರಿಮಂಡಲದ ನಡುವಳಿಯ ಬಗ್ಗೆ ಅಚರಣೆಗೆ ತಂದ ಹೊಸರೂಢಿಗಳು, ಅಂದರೆ ಮಂತ್ರಿಮಂಡಲದ ಸದಸ್ಯರ ಸಂಯುಕ್ತ ಹೊಣೆಗಾರಿಕೆ ಮತ್ತು ಉಪಾಧ್ಯಕ್ಷ ಪದ ಇವೆಲ್ಲವುಗಳಿಂದ ೧೪ ಸದಸ್ಯರಿರುವ ಮಂತ್ರಿಮಂಡಲದಲ್ಲಿ ೫ ಸ್ಥಾನಗಳನ್ನಷ್ಟೆ ಪಡೆದಿರುವ ತನ್ನ ಸ್ಥಿತಿ ನಿಸ್ಸಹಾಯವಾಗುವದೆಂದು ಲೀಗು ಸಹಜವಾಗಿ ಭಯಪಡುತ್ತದೆ. ಈ ಎಲ್ಲ ತೊಡಕುಗಳು ಮೂಲಭೂತ ಭಿನ್ನಾಭಿಪ್ರಾಯವನ್ನೆ ತಂದೊಡ್ಡಿವೆಯೆಂದು ಹೇಳಬೇಕು. ರಾಷ್ಟ್ರೀಯ ಮುಸ್ಲಿಮನ ಸೇರ್ಪಡೆಯನ್ನು ಕುರಿತು ಕಾಂಗ್ರೆಸ್ಸು ರವಷ್ಟು ಕದಲಲು ಸಿದ್ಧವಿಲ್ಲವೆಂದು ಜವಾಹರಲಾಲರು ದಿಲ್ಲಿ ಅ. ಭಾ. ಕಾಂ ಅಧಿವೇಶನದಲ್ಲಿ ಭರವಸೆಯಿತ್ತಿದ್ದರು. ಮಂತ್ರಿಮಂಡಲದ ಸಂಯುಕ್ತ ಹೊಣೆಗಾರಿಕೆಯ ರೂಢಿಯನ್ನು ತೆಗೆದೊಗೆದರೆ ಪುನಃ ಭಿನ್ನಾಭಿಪ್ರಾಯವುಳ್ಳ ಮಂತ್ರಿಗಳು ವಾಯಿಸರಾಯರನ್ನು ತಮ್ಮೆಡೆಗೆ ಹೊರಳಿಸಿಕೊಳ್ಳಲು ಪ್ರಯತ್ನಿಸ ಬಹುದಾದುದರಿಂದ ನಡುಗಾಲ ಸರಕಾರದ ಸ್ವಾತಂತ್ರ್ಯ ಏನೂ ಉಳಿಯದೆ ವಾಯಿಸರಾಯರ ಆಟವೇ ಸಾಗುವದು. ಅಂಥ ನಿರ್ವೀರ್ಯ ಮಂತ್ರಿಮಂಡಲದಲ್ಲಿರಲು ಕಾಂಗ್ರೆಸ್ಸು ಹೇಗೆ ಬಯಸೀತು ? ಈ ಮೂಲಭೂತ ಭಿನ್ನತೆಗಳು ಉಭಯತರ ನಡುವೆ ಬಾಯಿತೆರೆದು ನಿಂತಿದ್ದರೂ ಮಾತುಕತೆಗಳು ಇಂದು ಮುಕ್ತಾಯದ ಘಟ್ಟದ ಸಮೀಪಕ್ಕೆ ಬಂದಿವೆಯಂತೆ. ಆದರೂ ಉಭಯ ಪಕ್ಷಗಳು ತಮ್ಮ ಮೂಲಭೂತ ತತ್ವಗಳನ್ನು ತಾವು ಸಡಿಲಿಸಿಲ್ಲವೆಂದೂ ಹೇಳುತ್ತಿವೆ. ಹೀಗಿರಲು ಒಪ್ಪಂದ ಇಷ್ಟು ದೂರ ಹೇಗೆ ಮುಂದೆ ಸಾಗಿತು ?

### ಮರ್ಯಾದೆ ಉಳಿಸಿಕೊಳ್ಳುವ ಉಪಾಯುಗಳು

ರಾಜಕೀಯ ವರ್ಗಗಳ ಅಭಿಪ್ರಾಯದಲ್ಲಿ ಮುಂಬಯಿಯಲ್ಲಿ ಅ. ಭಾ. ಮುಸ್ಲಿಂ ಲೀಗ್ ಸಮಿತಿ ಬ್ರಿಟಿಶ ಯೋಜನೆಯನ್ನು ತಿರಸ್ಕರಿಸಿದ ನಂತರ ಲೀಗ್ ಪರಿಸ್ಥಿತಿ ದುರ್ಬಲವಾಗಿದೆ. ಅಲ್ಲಲ್ಲಿ ಜಾತೀಯ ಗಲಭೆಗಳಾದರೂ ಯಾರೂ ಅದನ್ನು ನೋಡಿ ಅಷ್ಟು ಬೆದರಿದಂತೆ ಕಾಣಲಿಲ್ಲ. ಇದೂ ಅಲ್ಲದೆ ಕಲಕತ್ತೆಯ ಭೀಷಣ ಹತ್ಯಾಕಾಂಡದ ನಂತರ ಜಿನ್ನಾ ಸಾಹೇಬರ ಮನಸೂ ಬದಲಿಸಿದೆಯೆಂದು ಹೇಳಲಾಗಿದೆ. ಇನ್ನು ಮುಸ್ಲಿಂ ಲೀಗ್ ವರ್ಗಗಳಲ್ಲೇ ಲೀಗು ಶಾಶ್ವತವಾಗಿ ವಿರೋಧ ಪಕ್ಷವಲ್ಲಿರದೆ ಈ ಸಂಧಿಯನ್ನು ಸಾಧಿಸಿ ಸರಕಾರದಲ್ಲಿ ಪ್ರವೇಶಿಸಬೇಕೆಂದು ಲೀಗ್ ಕಾರ್ಯ ಸಮಿತಿಯ ಒಂದು ಬಲಿಷ್ಠ ಗುಂಪು ಒತ್ತಾಯಗೊಳಿಸುತಿದೆಯಂತೆ. ಈ ಎಲ್ಲ ಕಾರಣಗಳಿಂದ ಜಿನ್ನಾರು ಮೆತ್ತಗಾಗಿರ ವರು. ಆದರೆ ಇಷ್ಟೊಂದು ಸ್ವಲ್ಪ ದಿನಗಳಲ್ಲಿ ಅವರು ಮೂರನೆ ಬಾರಿ ಹೇಗೆ ತಮ್ಮ ನಿಲುಮೆಯನ್ನು ಒಮ್ಮಿಂದೊಮ್ಮೆ ಬದಲಿಸಬೇಕು? ಅದರಿಂದ ಅವರಲ್ಲಿ ಮುಸ್ಲಿಮರ ಶ್ರದ್ಧೆ ಅಳಿದುಹೋಗದೆ ? ಇದಕ್ಕಾಗಿ ಹಾವೂ ಸಾಯದಂತೆ ಹಗ್ಗವೂ ಹರಿಯದಂತೆ ಕೇಂದ್ರ ಮಂತ್ರಿಮಂಡಲದಲ್ಲಿ ಪ್ರವೇಶಿಸಲು ಅವರಿಗೆ ಅವಕಾಶ ಮಾಡಿಕೊಡುವ ಕೆಲವು ಮರ್ಯಾದೆ ಉಳಿಸುವ ಉಪಾಯಗಳನ್ನು ಮಾಡಲಾಗಿದೆಯಂತೆ. ಕಾಂಗ್ರೆಸ್ಸು ಯಾವುದೇ ಮೂಲತತ್ವವನ್ನು ಬಲಿಗೊಡಲು ಸಿದ್ಧವಾಗಿಲ್ಲ. ಆದರೆ ಔದಾರ್ಯದಿಂದ ಇತರ ಸವಲತ್ತುಗಳನ್ನು ಕೊಡುವದು. ಮಂತ್ರಿಮಂಡಲದ ಉಪಾಧ್ಯಕ್ಷ ಪದವಿಯನ್ನು ಲೀಗ ಕಾಂಗ್ರೆಸ್ಸುಗಳು ಒಂದರ ಬೆನ್ನಿಗೊಂದು ಅಲಂಕರಿಸುವ ರೂಢಿಯನ್ನು ಪ್ರಾರಂಭಿಸಲು ಕಾಂಗ್ರೆಸ್ಸು ಸಿದ್ಧವಿದೆಯಂತೆ. ಜಾತೀಯ ವಿಷಯಗಳಲ್ಲಿ ಮುಸ್ಲಿಂ ಬಹುಮತಕ್ಕೆ ತಲೆವಾಗಲು ಕಾಂಗ್ರೆಸ್ಸು ಸಿದ್ಧವಿದೆಯಂತೆ. ಆದರೆ ಯಾವುದು ಜಾತೀಯ ವಿಷಯವೆಂಬದನ್ನು ನ್ಯಾಯಸ್ಥಾನವೇ ನಿರ್ಣಯಿಸಬೇಕು. ಹೊರತು ವಾಯಿಸರಾಯರಲ್ಲವೆಂದು ಕಾಂಗ್ರೆಸ್ಸಿನ ಹೇಳಿಕೆ. ಆದರೆ ಈಗ ಒದಗಿರುವ ತೊಡಕು ಒಡಂಬಡಿಕೆಯನ್ನು ಹೇಗೆ ಲಿಖಿತಕ್ಕಿಳಿಸಬೇಕೆಂಬ ವಿಷಯದಲ್ಲಿದೆಯೆಂದು ನಂಬಲಾಗಿದೆ. ಶಬ್ದಗಳ ವಿಷಯದಲ್ಲಿ ಈಗ ಚರ್ಚೆ ಹುಟ್ಟಿದೆಯಂತೆ. ಇದಲ್ಲದೆ ಜಿನ್ನಾ ಸಾಹೇಬರಿಗೆ ಎಂದಿನಿಂದಲೂ ಕಡು ವೈರಿಗಳಾಗಿರುವ ರಾಷ್ಟ್ರೀಯ ಮುಸ್ಲಿಮರ ಸೇರ್ಪಡೆಯ ಪ್ರಶ್ನೆಯೂ ಕಷ್ಟಕ್ಕಿಟ್ಟುಕೊಂಡಿದೆ. ಜಿನ್ನಾ ಸಾಹೇಬರು ಈಗ ಲೀಗೇತರ ಮುಸ್ಲಿಮರೊಡನೆ ತಾವು ಒಂದೇ ಸಾಲಿನಲ್ಲಿ ಕೂಡುವದಿಲ್ಲೆಂಬ ಹಟವನ್ನು ಬಿಟ್ಟು ಲೀಗೇತರ ಮುಸ್ಲಿಮರಿರಲಿ, ಆದರೆ ಅವರು ರಾಷ್ಟ್ರೀಯ ಮುಸ್ಲಿಮರಿರಕೂಡದು, ಸ್ವತಂತ್ರರಿರಬೇಕು. ಉದಾಹರಣೆಗಾಗಿ ಡಾ. ಝಕೀರ ಹುಸೇನರನ್ನು ಸೇರಿಸಿಕೊಳ್ಳಲಡ್ಡಿಯಿಲ್ಲ. ಎನ್ನತೊಡಗಿರುವರು. ಕಾಂಗ್ರೆಸಿನಲ್ಲಿ ಮುಸ್ಲಿಮರಿರುವದನ್ನು ಅಲಕ್ಷಿಸಿ ಅದನ್ನು ಹಿಂದೂ ಸಂಸ್ಥೆಯ ಸ್ಥಾನಕ್ಕೆ ತಳ್ಳಬೇಕೆಂಬ ಅವರ ಹಳೆಯ ಮಹತ್ವಾಕಾಂಕ್ಷೆಗೆ ಕಾಂಗ್ರೆಸು ಎಡೆಗೊಡುವ ಲಕ್ಷಣವಿಲ್ಲ. ಆದರೂ ಈ ತೊಡಕನ್ನು ಹೇಗಾದರೂ ಬಗೆಹರಿಸಲು ಭೋಪಾಲದ ನವಾಬರು ಅವಿರತ ಪರಿಶ್ರಮ ನಡೆಸಿರುವರೆಂದೂ ಈ ಚಿಲ್ಲರೆ ಪ್ರಶ್ನೆಗಳ ಮೇಲೆ ಮಾತುಕತೆ ಮುರಿಯಲಾರದೆಂದೂ ಆಶೆ ಹಿಡಿಯಲಾಗಿದೆ. ಜಿನ್ನಾರು ಈ ಸಂಧಿಯನ್ನು ಕಳೆದುಕೊಳ್ಳಲಾರರೆಂಬ ನಂಬಿಕೆಯೆ ಈ ಆಸೆಗೆ ಮೂಲವಾಗಿದೆ.

### ಭೋಪಾಲ—ವಾಯಿಸರಾಯ ಕುತಂತ್ರ ?

ಭೋಪಾಲ ನವಾಬರೂ ವಾಯಿಸರಾಯರೂ ಮುಸ್ಲಿಂಲೀಗನ್ನು ನಡುಗಾಲದಲ್ಲಿ ತರಲು ನಡೆಸಿರುವ ಪ್ರಯತ್ನವನ್ನು ರಾಷ್ಟ್ರೀಯ ವರ್ಗಗಳು ಸಂದೇಹದಿಂದ ನೋಡುತ್ತಿವೆ. ಖಾನ ಅಬ್ದುಲ ಗಫರಖಾನರಂಥ ಪ್ರಸಿದ್ಧ ಹಾಗು ಮಿತಭಾಷಿ ಮುಂದಾಳುಗಳೇ ವಾಯಿಸರಾಯರ ಉದ್ದೇಶ ಚೊಕ್ಕವಾಗಿಲ್ಲೆಂಬ ಭಾವನೆಯನ್ನು ವ್ಯಕ್ತಗೊಳಿಸಿದ್ದಾರೆ. ನಡುಗಾಲ ಸರಕಾರದ ಚಟುವಟಿಕೆಗಳ ಸ್ವಾತಂತ್ರ್ಯವನ್ನೂ ತಮ್ಮ ಸರ್ವಾಧಿಕಾರ ದುರ್ಬಲವಾಗುತಿರುವದನ್ನೂ ಕಂಡು ವೇವೆಲ್ಲರು ವಿರೋಧಿ ಗುಂಪೊಂದನ್ನು ಮಂತ್ರಿಮಂಡಲದಲ್ಲಿ ಹೊಗಿಸುವ ಮೂಲಕ ಒಡಕು ಹುಟ್ಟಿಸಲು ಹವಣಿಸುತಿರಬೇಕೆಂದು ಅವರು ಸಂಶಯಪಟ್ಟರು. ಭೋಪಾಲ ನವಾಬರು ಇಷ್ಟು ಓಡಾಡಲು ನರೇಂದ್ರರ ಸ್ವಾರ್ಥಸಾಧನೆಯೇ ಮೂಲವೆಂದು ಸಂದೇಹಪಡಿಸಲಾಗಿದೆ. ಕಾಂಗ್ರೆಸ್ಸು ಮತ್ತು ಅದರ ಬೆಂಬಲಿಗರು ಯಶಸ್ವಿಯಾಗಿ ರಾಜ್ಯಭಾರ ಮಾಡಿದರೆ ನರೇಂದ್ರರ ಪರಿಸ್ಥಿತಿ ತೀರ ದುರ್ಬಲವಾಗುವದೆಂದೂ ಪ್ರತಿಗಾಮಿ ಲೀಗನ್ನು ನಡುಗಾಲ ಸರಕಾರದಲ್ಲಿಯೂ ಘಟನಾ ಸಮಿತಿಯಲ್ಲಿಯೂ ಸೇರಿಸಿದರೆ ತಮಗೊಂದು ಊರುಗೋಲು ದೊರೆಯುವದೆಂದೂ ಅದರ ಹವಣಿಕೆ.

### ಚರ್ಚಿಲ್ಲರ ಸುಳ್ಳುಸಂತೆ

ದಿಲ್ಲಿ ಮಾತುಕತೆಗಳು ಸ್ಥಗಿತವಾಗಲು ಇನ್ನೂ ಒಂದು ಕಾರಣವನ್ನು ಊಹಿಸಬಹುದು. ಅದೆಂದರೆ ಬ್ಲ್ಯಾಕಪೂಲಿನಲ್ಲಿ ನಡೆದ ಬ್ರಿಟಿಶ ಕಾಂಜರ್ವೆಟಿವ ಪಕ್ಷದ ಪರಿಷತ್ತು ಮತ್ತು ಪಾರ್ಲಮೆಂಟನಲ್ಲಿ ತಾ. ೮ಕ್ಕೆ ಆಗಬೇಕಾಗಿದ್ದ ಹಿಂದುಸ್ತಾನ ಚರ್ಚೆ. ಬ್ಲ್ಯಾಕಪೂಲಿನಲ್ಲಿ ಚರ್ಚಿಲರೂ ಅವರ ಶಿಷ್ಯರೂ "ಸಾಮ್ಯವಾದಿ" ಕೂಲಿಕಾರ ಸರಕಾರದ ವಿರುದ್ಧ ಇರುವವರನ್ನೆಲ್ಲ ಒಂದುಗೂಡಿಸಿ ಅದರ ಹುಚ್ಚುಹುಚ್ಚು ಯೋಜನೆಗಳಿಗೆ ಸಂಯುಕ್ತ ವಿರೋಧವೊಡ್ಡಬೇಕೆಂದು ನಿರ್ಣಯಿಸಿದ್ದಲ್ಲದೆ ಹಿಂದುಸ್ತಾನದಲ್ಲಿ ಬರಿ ಸವರ್ಣ ಹಿಂದೂಗಳ ಪ್ರತಿನಿಧಿಯಾದ ಒಂದು ಪಕ್ಷದ ಕೈಯಲ್ಲಿ ಸರಕಾರದ ಸೂತ್ರಗಳನ್ನು ಕೊಟ್ಟದ್ದನ್ನು ಖಂಡಿಸುವ ಗೊತ್ತುವಳಿಯನ್ನು ಮಾಡಿದರು. ಕೂಗಿದರು ಚರ್ಚಿಲ್ಲರು. "ಹಿಂದುಸ್ತಾನವೆಂಬ ದೊಡ್ಡ ಹಡಗು ಶಾಂತವಾದ ಸಮುದ್ರದಲ್ಲಿ ಮುಳುಗತೊಡಗಿದೆ. ನಾವು ಅದನ್ನು ಮುಳುಗಿಸಲು ಸಹಾಯ ಮಾಡುತ್ತಿದ್ದೇವೆ. ಬ್ರಹ್ಮದೇಶದ ಗತಿಯೂ ಹೀಗೆಯೆ ಆಗುತಿದೆ. ೨೦೦ ವರ್ಷಗಳ ತ್ಯಾಗ ಪರಿಶ್ರಮಗಳಿಂದ ಕಟ್ಟಿದ ಹಿಂದೀ ಸಾಮ್ರಾಜ್ಯ ಕೈಬಿಟ್ಟು ಹೋಗುತ್ತಿದೆ. ೧೦ ಕೋಟಿ ಪ್ರಜೆಗಳ ಜನಾಂಗವೊಂದನ್ನು ಅಲಕ್ಷಿಸಿ ಬ್ರಿಟನದ ಕಡು ವೈರಿಗಳ ಕೈಗೆ ಅಧಿಕಾರ ಕೊಡಲಾಗಿದೆ. ಆ ನುಹಾ ಉಪಖಂಡಕ್ಕೆ ನಾವು ೧೫೦ ವರ್ಷಗಳಿಂದ ಶಾಂತಿ ಸಮಾಧಾನಗಳನ್ನು ಕೊಟ್ಟಿದ್ದೆವು. ಈಗ ನಮ್ಮ ಕಣ್ಮುಂದೆ ರಕ್ತಪಾತ, ಸಂಕಷ್ಟಗಳು ಹಿಂದೀ ಪ್ರಜೆಗಳನ್ನು ನುಂಗುವಂತಾಗಿದೆ" ...ಇತರರೂ ಇದೇ ಧೋರಣೆಯಲ್ಲಿ ಮಾತಾಡಿ ಕಾಂಗ್ರೆಸ್ಸಿನ ಮೇಲೆ ವಿಷ ಕಾರಿದರು. ಅಲ್ಪಸಂಖ್ಯಾಕರ ಹಿತರಕ್ಷಣೆಯ ಬುಡುಬುಡಿಕೆ ಬಾರಿಸಿದರು.

ಅಲ್ಪಸಂಖ್ಯಾಕರ ಬಗ್ಗೆ ಕುಟಿಲ ಸಹಾನುಭೂತಿ, ಸಾಮ್ರಾಜ್ಯವುಳಿಸುವ ಬಗ್ಗೆ ಸತ್ತ ಆಸ್ಥೆಗಳಿಂದ ಕೂಡಿದ ಈ ಭಾಷಣಗಳಿಂದ ಮತ್ತು ಗೊತ್ತುವಳಿಯಿಂದ ಮತ್ತೆ ಲೀಗ್ ವರ್ಗಗಳಲ್ಲಿ ಆಸೆ ಹುಟ್ಟಿರಲು ಸಾಕು. ತಾ ೮ಕ್ಕೆ ಆಗಬೇಕಾಗಿದ್ದ ಪಾರ್ಲಮೆಂಟಿನ ಹಿಂದುಸ್ತಾನ ಚರ್ಚೆಯಲ್ಲಿ ಕಾಂಜರ್ವೇಟಿವರ ಪ್ರಭಾವ ಎಷ್ಟು ಬೀರುವದೆಂದು ನೋಡಲು ಅವರು ತಡೆದಿರಬಹುದು. ಹಿಂದೆಯೂ ಒಪ್ಪಂದವಾಗುವ ಆಯಕಟ್ಟಿನ ಪ್ರಸಂಗಗಳಲ್ಲಿ ಲಂಡನ್ನಿನಿಂದ ಹೀಗೆ ಸೂತ್ರಜಾಲನೆ ನಡೆದು ಮಾತುಕತೆ ಮುರಿದುದುಂಟು ಆದರೆ ಈಬಾರಿ ಹಾಗಾಗುವ ಲಕ್ಷಣವಿಲ್ಲ. ದಿಲ್ಲಿಯಲ್ಲಿ ನಡೆದಿರುವ ಮಾತುಕತೆಗಳನ್ನು ಲಕ್ಷಿಸಿ, ಅವು ಯಶಸ್ವಿಯಾಗಿ ಕೊನೆಗೊಂಡು ಲೀಗು ಸರಕಾರದಲ್ಲಿ ಸೇರುವ ಆಸೆಯಿದ್ದುದರಿಂದ ಅದಕ್ಕೆ ತಡೆಯಾಗದಂತೆ ಪಾರ್ಲಮೆಂಟಿನ ಚರ್ಚೆಯನ್ನು ಮುಂದೆ ಹಾಕಲು ಎಲ್ಲ ಪಕ್ಷಗಳು ಒಪ್ಪಿಕೊಂಡಿವೆ. ಇದರಿಂದ ಮಾತುಕತೆಗಳ ಫಲಿತೆ ಸತ್ವರಿಣಾಮವಾದರೂ ಆಗಬಹುದು.

### ಜವಾಹರರ ಎಚ್ಚರಿಕೆ

ಬ್ಲ್ಯಾಕ್‌ಪೂಲ ಪರಿಷತ್ತಿನಲ್ಲಿ ಟೋರಿಗಳ ಕಿಡಿಗೇಡಿ ಭಾಷಣಗಳಿಂದ ಪಂಡಿತ ಜವಾಹರಲಾಲರು ಸಂತಪ್ತರಾಗಿ ಅವರಿಗೆ ಸಮರ್ಪಕ ಉತ್ತರವಿತ್ತಿದ್ದಾರೆ. ಭಾರತದ ವಾತಾವರಣವನ್ನು ಕದಡಿ, ಐಕ್ಯಕ್ಕೆ ಬಾಧೆಯುಂಟುಮಾಡುವ ಉದ್ದೇಶದಿಂದಲೇ ಈ ದ್ವೇಷಪೂರ್ಣ, ಹೊಣೆಗೇಡಿ ಭಾಷಣಗಳನ್ನು ಮಾಡಲಾಗಿದೆಯೆಂದು ಅವರು ಪ್ರಕಟಿಸಿದ್ದಾರೆ. "ಬ್ರಿಟನದೊಡನೆ ನಾವು ಸಹಕರಿಸಲೊಪ್ಪಿದ್ದೇವೆ. ಆದರೆ ನಮ್ಮನ್ನು ದ್ವೇಷಿಸುವವರೊಡನೆ ಮತ್ತು ನಮ್ಮ ಸ್ವಾತಂತ್ರ್ಯವನ್ನು ತುಚ್ಛೀಕರಿಸುವವರೊಡನೆ ನಾವೆಂದಿಗೂ ಸಹಕರಿಸಲಾರೆವೆಂ"ದು ಅವರು ಟೋರಿಗಳನ್ನು ಎಚ್ಚರಿಸಿದ್ದಾರೆ.

---

ವರ್ಧಾದಲ್ಲಿ ಕಿಸಾನ ಮುಂದಾಳುಗಳಾದ ಸ್ವಾಮಿ ಸಹಜಾನಂದರ ಅಧ್ಯಕ್ಷತೆಯಲ್ಲಿ ಮಧ್ಯಪ್ರಾಂತ ವರ್‍ಹಾಡ ಕಿಸಾನ ಪರಿಷತ್ತು ಜರಗಿತು. ಜಮೀನದಾರಿ ಮತ್ತು ಮಾಲಗುಜರಿ ಪದ್ಧತಿಯಿಂದ ರೈತರ ಹಿತವಾಗಿಲ್ಲ ಆದುದರಿಂದ ಅವು ನಿರ್ಮೂಲವಾಗಬೇಕೆಂದು ಅವರು ಹೇಳಿದರು. ನೆಹರು ಸರಕಾರಕ್ಕೆ ರೈತರು ಮತ್ತು ಕೂಲಿಕಾರರು ಬೆಂಬಲ ಕೊಡಬೇಕೆಂದೂ ಬಿನ್ನವಿಸಿದರು. ಮಾಲಗುಜರಿ ಮತ್ತು ಜಮೀನ್ದಾರಿ ಪದ್ಧತಿಗಳನ್ನು ಕಿತ್ತಿಹಾಕಬೇಕು. ಗ್ರಾಮ ಮತ್ತು ಒಕ್ಕಲತನ ಸುಧಾರಣೆ ಮಾಡಬೇಕೆಂದು ಮುಂತಾದ ಠರಾವು ಪಾಸಾದವು.

# ಅಂತರ್ ರಾಷ್ಟ್ರೀಯ

### ೨೧ ನಾಜಿಗಳು

ವಿಜಯಿಗಳೊಳಗೆ ನಡೆದ ಕಚ್ಚಾಟದ ಗಂಭೀರ ವಾತಾವರಣದಲ್ಲಿ ಜಗತ್ತಿನ ಲಕ್ಷ್ಯದಿಂದ ಮರೆಯಾಗಿ ಹೋಗಿದ್ದ ಜರ್ಮನ್ ನಾಜೀ ಧುರೀಣರು ಕಳೆದವಾರ ಮತ್ತೆ ಮುಂಬೆಳಕಿಗೆ ಬಂದರು. ಯುದ್ಧ ಮಾಡಿ ಸೋಲುವ ಮಹಾಪರಾಧ ಮಾಡಿಯೂ ಹಿಟ್ಲರ, ಗೋಬೆಲ್ಸರಂತೆ ಸಾಯಲು ತಪ್ಪಿದ ೨೧ ಜನ ನಾಜಿ ಮುಂದಾಳುಗಳ ೯ ತಿಂಗಳಿಗಿಂತಲೂ ಹೆಚ್ಚು ಕಾಲ ನಡೆದ ವಿಚಾರಣೆ ಮೊನ್ನೆ ಅಕ್ಟೋಬರ ೧ ಕ್ಕೆ ಮುಗಿದು ಆ ದುರ್ದೈವಿಗಳಮೇಲೆ ತೀರ್ಪು ಹೇಳಲಾಯಿತು. ಮಿತ್ರರಾಷ್ಟ್ರಗಳು ನ್ಯೂರೆಂಬರ್ಗಿನಲ್ಲಿ ಇದಕ್ಕಾಗಿ ಒಂದು ನ್ಯಾಯಮಂಡಳವನ್ನು ಸ್ಥಾಪಿಸಿದ್ದರು. ಎಂಟು ನ್ಯಾಯಾಧೀಶರಿಂದೊಡಗೂಡಿದ ಈ ನ್ಯಾಯ ಮಂಡಲದ ಅಧ್ಯಕ್ಷರು ಬ್ರಿಟಿಶರಾದ ಲಾರ್ಡ ಲಾರೆನ್ಸರು ಫ್ರೆಂಚ, ಬ್ರಿಟಿಶ, ಸೋವಿಯೇಟ, ಅಮೇರಿಕನ್ ನ್ಯಾಯಾಧಿಕಾರಿಗಳು ಅದರಲ್ಲಿದ್ದರು.

ಈ ಎಂಟು ಧರ್ಮರಾಜರು ೮ ತಿಂಗಳು ನಡೆಸಿದ ವಿಚಾರಣೆಯ ೫೫೦೦ ಶಬ್ದಗಳ ತೀರ್ಪನ್ನು ಓದಲು ಸೆಪ್ಟಂಬರ ೩೦, ಅಕ್ಟೋಬರ ೧ ಹೀಗೆ ಎರಡು ದಿನ ಹಿಡಿದವು. ಅಮೇರಿಕನ್ ಸೇನಾಧಿಕಾರಿಗಳು ಇತಿಹಾಸದಲ್ಲೇ ಅಭೂತಪೂರ್ವವಾದ ಈ ತೀರ್ಪಿನ ದಿನ ಸಂಭವಿಸಬಹುದಾದ ಅಳಿದುಳಿದ ನಾಜೀ ಭಯೋತ್ಪಾದಕರ ಪುಂಡಾಟಿಕೆಯನ್ನು ಹತ್ತಿಕ್ಕಲು ಬೇಕಾದ ಮುಂಜಾಗ್ರತೆ ವಹಿಸಿದ್ದರು. ಆದರೂ ಅಂಥದೇನೂ ಸಂಭವಿಸಲಿಲ್ಲ.

ವಿವಿಧ ರಾಷ್ಟ್ರಗಳು ಕೈದಿಗಳ ಮೇಲೆ ತಂದ ಆರೋಪಗಳು ಕಾಯಿದೆಗನುಸಾರವಾಗಿ ನಾಲ್ಕು ತಲೆಕಟ್ಟುಗಳಲ್ಲಿ ವಿಂಗಡಿಸಲ್ಪಟ್ಟಿದ್ದವು. ೧ ದುಷ್ಟ ಕೃತ್ಯ ಮಾಡಲು ಒಳಸಂಚು ೨. ಆಕ್ರಮಣಶೀಲ ಯುದ್ಧವನ್ನು ಯೋಜಿಸಿ ಸಾಗಿಸಿದ್ದು ೩. ಯುದ್ಧಾಪರಾಧಗಳನ್ನು ಮಾಡಿದ್ದು ೪. ಮಾನವ್ಯದ ವಿರುದ್ಧ ಅಪರಾಧಗಳನ್ನೆಸಗಿದ್ದು.

ತಾ. ೧ ಮುಂಜಾನೆ ಆಶಾಭರಿತರಾಗಿ ನಾಜಿ ಮುಂದಾಳುಗಳು ಒಬ್ಬೊಬ್ಬರಾಗಿ ಅಪರಾಧಿ ಪಂಜರದಲ್ಲಿ ಪ್ರವೇಶಿಸಿ ತಮ್ಮ ಮೇಲಿನ ತೀರ್ಪು ಕೇಳಿದರು. ಅದು ಮುಗಿದಾಗ ಎರಡು ಸಾಲು ಬಿಳಿಚಿದ ಮೋರೆಗಳು ಕಾಣಿಸಿಕೊಂಡವು.

೧೧ ಅಪರಾಧಿಗಳಿಗೆ ಗಲ್ಲಿನ ಶಿಕ್ಷೆ ದೊರಕಿತು. ೩ ಜನರಿಗೆ ಆಜನ್ಮ ಶಿಕ್ಷೆ, ಇಬ್ಬರಿಗೆ ೨೦ ವರ್ಷ, ಒಬ್ಬನಿಗೆ ೧೫ ವರ್ಷ, ಇನ್ನೊಬ್ಬನಿಗೆ ೧೦ವರ್ಷ ಮೂರು ಜನರು ಮಾತ್ರ ಸುದೈವಿಗಳು. ಅವರ ಮೇಲೆ ಅಪರಾಧಗಳು ಸಿದ್ಧವಾಗಲಿಲ್ಲೆಂದು ನ್ಯಾಯಾಲಯ ನಿರ್ಣಯಿಸಿತು.

ನಾಜೀ ವಿಮಾನಪಡೆಯ ನಾಯಕ, ಹಿಟ್ಲರನ ಬಲಗೈ, ಆಡಂಬರಪ್ರಿಯ, ಬಾಯಬಡಕ, ಡೊಳ್ಳುಹೊಟ್ಟೆಯ ಗೋರಿಂಗನನ್ನು 'ಆಕ್ರಮಕ ಯುದ್ಧಗಳ ಚಾಲಕಶಕ್ತಿಯೆಂದು ಕರೆದು' ಅವನ ಅಪರಾಧಗಳ ಅಸಾಧಾರಣ ಅಗಾಧತೆಯನ್ನು' ಅನುಲಕ್ಷಿಸಿ ಗಲ್ಲಿನ ಶಿಕ್ಷೆಗೆ ಗುರಿಮಾಡಿದರು. ಅವನೊಡನೆ ಗಲ್ಲಿನಲ್ಲಿ ಪಾಲುಗಾರರಾಗುವ ಇತರರು ಇವರು: ಹಿಟ್ಲರನ ವಿದೇಶಮಂತ್ರಿ ವಾನ್ ರಿಬನ್‌ಟ್ರಾಪ, ಜರ್ಮನ್ ಸೇನಾಪತಿ ಮಂಡಲದ ಮುಖ್ಯನಾದ ವಿಲ್ಹೆಲ್ಮ ಕೀಟಲ, ಗುಪ್ತಪೋಲೀಸ ನಾಯಕ ಹಿಮ್ಲರನ ಬಲಗೈಯಾಗಿ ರಾಜಕೀಯ ಕೈದಿಗಳ ಚಿತ್ರವಧೆ ನಡೆಸಿದ ಕಾಲ್ಟೆನ ಬ್ರೂಕರ, ನಾಜೀ ತತ್ವಜ್ಞಾನದ ಋಷಿಯೆನಿಸಿ ಜರ್ಮನರ ಸರ್ವೋತ್ತಮತೆಯನ್ನು ಪ್ರತಿಪಾದಿಸಿದ ಆಕ್ರಮಿತ ರಾಜ್ಯಗಳ ಮಂತ್ರಿ ರೋಸೆನಬರ್ಗ, ಜರ್ಮನ್ ಪಾತಕದ ಪರಿಮಾರ್ಜನಕ್ಕೆ ಇನ್ನು ೧೦೦೦ ವರ್ಷ ಬೇಕೆಂದು ನ್ಯಾಯಾಲಯದ ಮುಂದೆ ಒಪ್ಪಿಕೊಂಡ ಆಕ್ರಮಿತ ಪೋಲಂಡಿನ ಗವರ್ನರ ಹ್ಯಾನ್ಸ ಫ್ರಾಂಕ, ಕೂಲಿಕಾರ ಸಂಘಗಳ ನಿರ್ನಾಮಕ್ಕೆ ಕಾರಣನಾದ ವಿಲ್ಹೆಲ್ಮ ಫ್ರಿಕ್, ಯಹೂದ್ಯ ದ್ವೇಷವನ್ನು ಪತ್ರಿಕೆಗಳ ಮುಖಾಂತರ ಹಬ್ಬಿಸಿದ ಜೂಲಿಯಸ್ ಸ್ಟ್ರೀಚರ, ಆಕ್ರಮಿತ ಪ್ರದೇಶಗಳಿಂದ ೫,೦೦೦,೦೦೦ ಕೂಲಿಕಾರರನ್ನು ಎಳೆತಂದು ಅಮಾನುಷವಾಗಿ ದುಡಿಸಿಕೊಂಡ ಫ್ರಿಟ್ಸ ಸಾಕೆಲ್, ಜರ್ಮನ ಸೇನಾಪತಿ ಮುಖ್ಯನಾದ ಅಲ್ಫ್ರೆಡ್ ಜೋಡ್ಲ, ಆಸ್ಟ್ರಿಯಾದ ಹಿಂದಿನ ಗವರ್ನರ, ಆಕ್ರಮಿತ ಹಾಲಂಡಿನ ಕಮೀಶನರ ಸೆಸ್ ಇನ್‌ಕ್ವಾರ್ಟ, ಹಿಟ್ಲರನ ಡೆಪ್ಯೂಟಿಯಾಗಿ ಈ ಕಣ್ಮರೆಯಾಗಿರುವ ಮಾರ್ಟಿನ್ ಬೋರ್ಮನ್.

ಆಜನ್ಮ ಶಿಕ್ಷೆಗೆ ಗುರಿಯಾದವರಲ್ಲಿ ಹೆರ್ ಹೆಸ್ಸನ ಹೆಸರು ಎಲ್ಲರಿಗೂ ಗೊತ್ತು. ೧೯೪೧ ರಲ್ಲಿ ಹಿಟ್ಲರನ ಶಾಂತಿ ದೂತನಾಗಿ ಇಂಗ್ಲಂಡಿಗೆ ಹಾರಿದ ಹಿಟ್ಲರನ "ಹುಚ್ಚು" ಡೆಪ್ಯೂಟಿಯವನು. ಯಹೂದ್ಯ ವಿರೋಧಿ ಯೋಜನೆಗಳಲ್ಲಿಯೂ ಆಕ್ರಮಿತ ರಾಜ್ಯಗಳ ಶೋಷಣೆಯಲ್ಲಿಯೂ ಭಾಗಿಯಾದ ವಾಲ್ಟರ ಫಂಕ, ನಾಜೀ ಪಕ್ಷದ ಸಂಸ್ಥಾಪಕ ಎರಿಕ್ ರೇಡರ್ ಇವರೂ ಆಜನ್ಮ ಸೆರೆಮನೆಯಲ್ಲಿ ಕಳೆಯುವರು.

ನಾಜೀಯುವಕಚಳವಳಿಯನಾಯಕ ಬಾಲ್ಡರ್ ವಾನ್ ಸಿರಾಚ (ವಯಸ್ಸು ೩೮), ಶಸ್ತ್ರಾಸ್ತ್ರ ಉದ್ಯೋಗಗಳನ್ನು ಕಟ್ಟಿದ ಅಲ್ಬರ್ಟ ಸ್ಪೀಯರರು, ೨೦ ವರ್ಷ ಶಿಕ್ಷೆಗೊಳಗಾದರೆ, ರಿಬನ್‌ಟ್ರಾಪನಿಗಿಂತ ಮೊದಲು ವಿದೇಶ ಮಂತ್ರಿಯಾಗಿದ್ದ ನ್ಯುರಾಥನು ೧೫ ವರ್ಷ ಶಿಕ್ಷೆ ಅನುಭವಿಸುವನು.

ನೌಕಾ ನಾಯಕ ಡೊನಿಟ್ಸನು ಜರ್ಮನಿಯ ಶರಣಾಗತಿಗೆ ಸಹಿಮಾಡಿದವನಾದ್ದರಿಂದಲೋ ಏನೋ ೧೦ ವರ್ಷ ಶಿಕ್ಷೆಯಿಂದಲೇ ಪಾರಾದನು.

ಶಿಕ್ಷೆಯಿಲ್ಲದೆ ಪಾರಾದ ಸುದೈವಿಗಳಲ್ಲಿ ಡಾ. ಶಾಟನು ಪ್ರಸಿದ್ಧ ಅರ್ಥಶಾಸ್ತ್ರಿ, ಜರ್ಮನಿಯ ಆರ್ಥಿಕ ಪುನರುಜ್ಜೀವನದ ಕರ್ತ; ರಾಯಭಾರ ನಿಪುಣ ವಾನ್ ಪೇಪೆನ್ ಮತ್ತು ಪ್ರಚಾರ ಉಪಮಂತ್ರಿ ಹ್ಯಾನ್ಸ್ ಫ್ರಿಟ್ಸ ಇವರು ಇರುವರು.

### ಎರಡು ದನಿ

ಈ ಜರ್ಮನ್ ಯುದ್ಧಾಪರಾಧಿಗಳನ್ನು ದಂಡಿಸಿದ ನ್ಯಾಯಾಧೀಶರು ಒಂದೇ ದನಿಯಿಂದ ತೀರ್ಪಿಯಲಿಲ್ಲ. ಸೋವಿಯಟ್ ನ್ಯಾಯಾಧೀಶರು ಕೆಲ ವಿಷಯಗಳಲ್ಲಿ ಬದಲು ಅಭಿಪ್ರಾಯದವರಿದ್ದರು. ಅವರಿಗೆ ಶಾಟ, ಪೇಪೆನ್, ಫ್ರಿಟ್ಸರನ್ನು ಬಿಡುಗಡೆ ಮಾಡಿದ್ದು ಸರಿಯೆಂದು ತೋರಲಿಲ್ಲ. ಅಲ್ಲದೆ ಹೆಸ್ಸನಿಗೆ ಮರಣವೇ ಸರಿಯಾದ ಶಿಕ್ಷೆಯಾಗಿತ್ತೆಂದು ಅವರ ಹೇಳಿಕೆಯಾಗಿತ್ತು. ಇದಲ್ಲದೆ ಜರ್ಮನ್ ಮಂತ್ರಿಮಂಡಳವನ್ನೂ ಸೇನಾಪತಿಮಂಡಲವನ್ನೂ ವರಿಷ್ಠ ಯುದ್ಧ ಮಂಡಲವನ್ನೂ ಅಪರಾಧಿಸಂಸ್ಥೆಗಳೆಂದು ಸಾರಬೇಕಾಗಿತ್ತೆಂದೂ ಅವರು ಅಭಿಪ್ರಾಯಪಟ್ಟರು. ನ್ಯಾಯಮಂಡಲದವರು ಆ ಸಂಸ್ಥೆಗಳನ್ನು ದೋಷಮುಕ್ತಮಾಡಿ ಕೇವಲ ಎಸ್ ಎಸ್ ಗುಪ್ತದಳದ ಕೆಲಭಾಗಗಳನ್ನು ಮಾತ್ರ ಅಪರಾಧಿಗಳೆಂದು ನಿರ್ಣಯಿಸಿದ್ದನ್ನು ಅವರು ಒಪ್ಪಲಿಲ್ಲ. ಈ ಸಂಸ್ಥೆಗಳು ದೋಷಮುಕ್ತವಾದರೂ ಅವುಗಳಲ್ಲಿ ಕೆಲ ದುಷ್ಟರನ್ನು ಹಿಡಿದು ಶಿಕ್ಷಿಸಬಹುದು.

### ಕೃಪಾಯಾಚನೆ

ಗಲ್ಲಿನ ಮತ್ತು ದೀರ್ಘಾವಧಿ ಶಿಕ್ಷೆಗೆ ಗುರಿಯಾದವರಲ್ಲಿ ಹಲವರು, ರಿಬನ್‌ಟ್ರಾಪ ಮೊದಲಾದವರು, ದಯಾಯಾಚನೆಯ ಅರ್ಜಿಹಾಕುವರಂತೆ. ಈ ಅರ್ಜಿಯನ್ನು ಮಿತ್ರರ ಜರ್ಮನ್ ನಿಯಂತ್ರಣ ಮಂಡಳಕ್ಕೆ ಹಾಕಬೇಕು. ಅವರು ಶಿಕ್ಷೆಯನ್ನು ಕಡಿಮೆ ಮಾಡಬಹುದು ಹೊರತು ಹೆಚ್ಚಿಸಲಾರರು. ದಯಾಯಾಚನೆಯ ಅರ್ಜಿಗಳು ತಿರಸ್ಕೃತವಾದರೆ ಕೈದಿಗಳು ಅಕ್ಟೋಬರ ೧೬ ಕ್ಕೆ ಗಲ್ಲಿನ ನೇಣನ್ನು ಕಾಣಬೇಕಾಗುವದು.

ಕ್ಷತ್ರಿಯ ರಕ್ತದ ಕೀಟೆಲ್ಲನು ಮಾತ್ರ ಗಲ್ಲಿನ ಶಿಕ್ಷೆಯನ್ನು ಗುಂಡಿಕ್ಕಿ ಕೊಲ್ಲುವ ಶಿಕ್ಷೆಗೆ ಮಾರ್ಪಡಿಸಬೇಕೆಂದು ಅರ್ಜಿ ಹಾಕುವನಂತೆ. ಅದಕ್ಕಿಂತಲೂ ವಿಚಿತ್ರವೆಂದರೆ ಸ್ಪೀಯರನಿಗೆ ದೀರ್ಘಾವಧಿ ಶಿಕ್ಷೆಗಿಂತ ಮರಣದಂಡನೆಯೇ ಹೆಚ್ಚು ಮೆಚ್ಚುಗೆಯಂತೆ.

### ೫೦ ವರ್ಷಗಳಲ್ಲಿ ---

ಸಾಯಲಿರುವವರ ನಾಯಕನಾದ ಬಾಯಿಬಡಕ ಗೋರಿಂಗನನ್ನು ಮಾತಾಡಿಸಲು ಪತ್ರಿಕಾ ಪ್ರತಿನಿಧಿಗಳು ಅವನ ಕತ್ತಲು ಕೋಣೆಯಲ್ಲಿ ನುಗ್ಗಿದರು. " ಜರ್ಮನ್ ಇತಿಹಾಸದಲ್ಲಿ ನಿಮ್ಮ ಸ್ಥಾನವೇನು ? ೨೦ ವರ್ಷಗಳ ನಂತರ ಜರ್ಮನರು ನಿಮ್ಮ ಬಗ್ಗೆ ಏನು ಅಭಿಪ್ರಾಯಪಡಬಹುದು ? ೫೦ ವರ್ಷಗಳಲ್ಲಿ ಅವರು ನಿಮ್ಮನ್ನು ಕುರಿತು ಏನೆಣಿಸಬಹುದು" ಎಂದು ಪ್ರಶ್ನಿಸಿದರು.

"ಇಂದು ಜರ್ಮನ್ ರಾಷ್ಟ್ರವೆಂಬುದೇ ಇಲ್ಲ. ಕೆಲ ಜರ್ಮನರು ನನ್ನನ್ನು ಶಪಿಸಬಹುದೆಂದು ನನಗೆ ಗೊತ್ತು. ಆದರೆ ಶಾಂತಿರಕ್ಷಣೆಗೆ ಕೈಲಾದ ಪ್ರಯತ್ನ ಮಾಡಿ ಆಮೇಲೆ ಯುದ್ಧದಲ್ಲಿ ಜಯದೊರಕಿಸಲು ಪ್ರಯತ್ನಿಸಿದೆನೆಂದು ನಂಬುವವರೂ ಇದ್ದಾರೆ. ೨೦ ವರ್ಷಗಳ ನಂತರ ಜರ್ಮನರು ನನ್ನ ಮೇಲೆ ಪಡುವ ಅಭಿಪ್ರಾಯ ಈ ಸಂಧಿಯಲ್ಲಿ ನಡೆಯುವ ಪ್ರಚಾರವನ್ನು ಅವಲಂಬಿಸಿದೆಯಾದರೂ ೫೦ ವರ್ಷಗಳ ನಂತರ ಮಾತ್ರ ಜರ್ಮನ್ ರಾಷ್ಟ್ರ ಉಳಿದರೆ ಅದು ನನ್ನ ಯೋಗ್ಯತೆಯನ್ನು ಅರಿತುಕೊಳ್ಳುವದು" ಎಂದನವನು.

### ಕಾವಲಿಯಿಂದ ಒಲೆಗೆ

ಬಂಧಮುಕ್ತರಾದ ಶಾಟ, ಪೇಪೆನ, ಫ್ರಿಟ್ಸರ ಸುದೈವ ಕೇವಲ ಕ್ಷಣಿಕವಾಗಿತ್ತು. ಅವರ ಮೇಲೆ ಜರ್ಮನರ ಶುದ್ಧೀಕರಣ ನ್ಯಾಯಾಲಯದವರು ವಾರಂಟು ಹೊರಡಿಸಿದ್ದಾರೆ. ಅವರು ಯಾರಿಗೂ ಬೇಡದವರಾಗಿದ್ದಾರೆ. ಪೇಪೆನ್ನರು ಫ್ರೆಂಚ ಆಕ್ರಮಿತ ಭಾಗದಲ್ಲಿದ್ದ ತಮ್ಮ ಹೆಂಡತಿಯನ್ನು ಕೂಡಿಕೊಳ್ಳಲು ಹೊರಟಾಗ ಫ್ರೆಂಚ ಸರಕಾರ ಅವರಿಗೆ ಪ್ರವೇಶ ಕೊಡಲಿಲ್ಲ. ಡಾ. ಶಾಟರನ್ನು ಈಗಾಗಲೇ ಬಂಧಿಸಲಾಗಿದೆ. ಪೇಪೆನ್ನನು ಆಸ್ಟ್ರಿಯಾದ ಆಕ್ರಮಣಕ್ಕೆ ಕಾರಣನೆಂದು ಅವನನ್ನು ವಿಚಾರಣೆಗೆಳೆಯಲು ಆಸ್ಟ್ರಿಯನ್ ಸರಕಾರ ಅಪೇಕ್ಷಿಸಿದೆ.

### ಶಾಂತಿ ಪರಿಷತ್ತು

ಪ್ಯಾರೀಸಿನಲ್ಲಿ ಸೇರಿರುವ ಶಾಂತಿಪರಿಷತ್ತಿನ ಕೊನೆಯ ಘಟ್ಟ ಪ್ರಾರಂಭವಾಗಿದೆ. ಸಮಿತಿಗಳ ಕಾರ್ಯಕಲಾಪ ಮುಗಿದು ಮಹಾಸಭೆ ಸೇರಿದೆ. ಇಟಲಿ ಮತ್ತು ಇತರ ಭೂತಪೂರ್ವ ಶತ್ರುರಾಷ್ಟ್ರಗಳ ಶಾಂತಿ ಒಡಂಬಡಿಕೆಯ ಪ್ರಶ್ನೆಗಳನ್ನು ಮಹಾಸಭೆಯಲ್ಲಿ ಚರ್ಚಿಸಿ ಇದೇ ೧೫ ನೇ ತಾರೀಖಿನೊಳಗಾಗಿ ಪರಿಷತ್ತಿನ ಕಾರ್ಯ ಮುಗಿಯಬೇಕಾಗಿರುವದರಿಂದ ಬಹಳ ರಭಸದಿಂದ ಕೆಲಸ ನಡೆದಿದೆ. ಪ್ರತಿಯೊಂದು ರಾಷ್ಟ್ರದ ಪ್ರತಿನಿಧಿ ಮಾತಾಡಬಹುದಾದ ಕಾಲವನ್ನೂ ಪ್ರತಿಯೊಂದು ಶತ್ರುರಾಷ್ಟ್ರದ ಶಾಂತಿ ಒಪ್ಪಂದದ ವಿಚಾರ ಮಾಡಬೇಕಾದ ಕಾಲವನ್ನೂ ಕಠೋರವಾಗಿ ನಿಯಮಿಸಲಾಗಿದೆ. ಏಕೆಂದರೆ, ತಾ, ೨೩ಕ್ಕೆ ಯುಕ್ತರಾಷ್ಟ್ರಗಳ ಅಧಿವೇಶನ ಆರಂಭವಾಗಬೇಕಾಗಿದ್ದು ಶಾಂತಿ ಪರಿಷತ್ತಿನ ಹಣೆಬರಹ ಅಷ್ಟರೊಳಗೆ ನಿರ್ಣಯಗೊಳ್ಳುವದವಶ್ಯ. ಪರಿಷತ್ತು ಕೊನೆಯಲ್ಲಿ ನಿರ್ಣಯಗಳನ್ನೂ ಸೂಚನೆಗಳನ್ನೂ ಸ್ವೀಕರಿಸಿ ಅವುಗಳನ್ನು ವಿದೇಶ ಮಂತ್ರಿಗಳ ಸಭೆಗೆ ಕಳಿಸುವದು. ಅವರು ಶಾಂತಿ ಒಪ್ಪಂದಗಳ ಕೊನೆಯ ಪ್ರತಿಗಳನ್ನು ಸಿದ್ಧಗೊಳಿಸುವರು. ಆಮೇಲೆ ವಿವಿಧ ರಾಷ್ಟ್ರಗಳ ಸಹಿ............

ಆದರೆ ಒಪ್ಪಂದಗಳೆಲ್ಲ ಸುಸೂತ್ರವಾಗಿ ಸಿದ್ಧವಾಗುವ ಮಾತು ಮಾತ್ರ ಇನ್ನೂ ಸಂದಿಗ್ಧದಲ್ಲಿಯೇ ಇದೆ. ಟ್ರೀಸ್ಟ್ ಪ್ರಶ್ನೆಯ ವಿಷಯದಲ್ಲಿ ಸ್ಲಾವ ರಾಷ್ಟ್ರಗಳು ಎಂದಿನಷ್ಟೇ ಹಟನಾರಿತನ ವಹಿಸಿವೆ. ಡಾನ್ಯೂಬ ನದಿಯ ನೌಕಾಯಾನದ ಪ್ರಶ್ನೆ ಆ ನದಿಯ ದಂಡೆಗಿರುವ ರಾಷ್ಟ್ರಗಳಿಗೆ ಮಾತ್ರ ಸಂಬಂಧಿಸಿರಬೇಕೆಂದೂ ಅದನ್ನು ಒಪ್ಪಂದದಲ್ಲಿ ಸೇರಿಸಬಾರದೆಂದೂ ರಶಿಯಾ ಮತ್ತು ಅದರ ಬೆಂಬಲಿಗರು ಮಾಡಿದ ಸೂಚನೆಗಳನ್ನು ಮತಾಧಿಕ್ಯದಿಂದ ಸೋಲಿಸಲಾಯಿತು. ಗ್ರೀಸದ ಪ್ರಾದೇಶಿಕ ಬೇಡಿಕೆಗಳು –ಅಂದರೆ ಪಶ್ಚಿಮ ಥ್ರೇಸ್ ಹಾಗು ಸೈಪ್ರಸ್ ದ್ವೀಪ— ಮನ್ನಿಸಲ್ಪಡಲಿಲ್ಲ. ಇವೆಲ್ಲ ತೊಡಕುಗಳು ಒಂದಲ್ಲ ಒಂದು ಅವಸ್ಥೆಯಲ್ಲಿ ಬಿಕ್ಕಟ್ಟನ್ನು ತಂದೊಡ್ಡಬಹುದೆಂದು ಊಹಿಸಲಾಗಿದೆ.

### ಗ್ರೀಸಿಗೆ ಶಸ್ತ್ರಸಹಾಯ

ಉತ್ತರ ಗ್ರೀಸಿನಲ್ಲಿ ಪ್ರಾರಂಭವಾದ ಸಶಸ್ತ್ರ ಬಂಡಾಯ ಒಂದು ಬಗೆಯ ಯಾದವೀ ಯುದ್ಧದ ಮಟ್ಟಕ್ಕೇರಿ ಬಿಟ್ಟಿದೆ. ಗ್ರೀಕ್ ಸರಕಾರದಲ್ಲಿ ಸೇರಲು ಉದಾರಮತವಾದಿಗಳು ನಿರಾಕರಿಸಿದ್ದು ಅದು ಕೇವಲ ರಾಜಪಕ್ಷದವರ ನಾಟಕಶಾಲೆಯಾಗಿಬಿಟ್ಟುದರಿಂದ ಬರಿ ಶಸ್ತ್ರ ಬಲದಿಂದಲೇ ಸರಕಾರ ಇಂದು ಸಾಮ್ಯವಾದಿಗಳ ವಿರೋಧವನ್ನು ಹತ್ತಿಕ್ಕಬೇಕಾಗಿದೆ. ಬ್ರಿಟಿಶ ಸೈನಿಕರು ಇನ್ನೂ ಅಲ್ಲಿ ತಳವೂರಿರುವದರಿಂದ ಸರಕಾರದ ವಿರೋಧಿಗಳ ಆಟ ಅಷ್ಟು ಯಶಸ್ವಿಯಾಗಿ ನಡೆಯದೆ ಹೋಗಿದೆ. ಇತ್ತ ಈ ಗಲಭೆಗಳಿಂದ ಬ್ರಿಟಿಶರಿಗೆ ತಮ್ಮ ಸೈನ್ಯವನ್ನು ಇನ್ನಷ್ಟು ಸಮಯ ಅಲ್ಲಿ ಇರಿಸಿ ಸೋವಿಯಟ್ ಪ್ರಭಾವಕ್ಕೆ ಅಡ್ಡಗಾಲು ಹಾಕಲು ನೆವ ಸಿಕ್ಕಿದೆ. ಬೆವಿನ್ನರು ಪ್ರಕ್ಷುಬ್ಧ ಪರಿಸ್ಥಿತಿಯ ಕಾರಣದಿಂದ ಅಲ್ಲಿಂದ ಬ್ರಿಟಿಶ ಪಡೆಗಳನ್ನು ಹಿಂದೆ ಕರೆಸುವ ಅವಧಿಯನ್ನು ಸೂಚಿಸಲು ಸಾಧ್ಯವಾಗಿಲ್ಲವೆಂದಿದ್ದಾರೆ. ಅಲ್ಲಿಯ ತಿಕ್ಕಾಟದಲ್ಲಿ ಬ್ರಿಟಿಶ ಸೈನಿಕರ ಕೈಯೂ ಎಲ್ಲಿ ಸಿಕ್ಕಿ ಹೋಗುವದೋ ಎಂಬ "ಭಯ" ವನ್ನು ಗ್ರೀಕ ಮತ್ತು ಬ್ರಿಟಿಶ ವರ್ಗಗಳೆರಡೂ ವ್ಯಕ್ತಗೊಳಿಸಿವೆ. ಆಂತರಿಕ ಶತ್ರುಗಳನ್ನು ಹತ್ತಿಕ್ಕುವ ಸಲುವಾಗಿ ಶಸ್ತ್ರಾಸ್ತ್ರಗಳನ್ನು ತಮಗೆ ಪೂರೈಸಬೇಕೆಂದು ಯಾಚಿಸಲು ಗ್ರೀಕ ಸರಕಾರಿ ಶಿಷ್ಟಮಂಡಲವೊಂದು ಇಂಗ್ಲಂಡಿಗೆ ಬಂದಿದೆ ಈ ಶಸ್ತ್ರಾಸ್ತ್ರಗಳಿಂದ ಉತ್ತರ ಗ್ರೀಸದ ರೈತರನ್ನು ಸಶಸ್ತ್ರರಾಗಿ ಮಾಡಿ ಸಾಮ್ಯವಾದಿಗಳನ್ನು ಹಣಿಯಹಚ್ಚಬೇಕೆನ್ನುತ್ತದೆ ಸರಕಾರ. ಆದರೆ ಶಸ್ತ್ರಾಸ್ತ್ರಗಳನ್ನೊದಗಿಸಬೇಕೋ ಬೇಡವೋ ಎಂಬ ಬಗ್ಗೆ ಇಂಗ್ಲಂಡಿನಲ್ಲಿ ಭಿನ್ನಾಭಿಪ್ರಾಯಗಳಿವೆ.

### ಮತ್ತೆ ಡಾರ್ಡನೆಲ್ಸ

ಕೆಲವು ವಾರಗಳ ಕೆಳಗೆ ಒಮ್ಮಿಂದೊಮ್ಮೆ ಅಂತರ್ ರಾಷ್ಟ್ರೀಯ ವಾತಾವರಣವನ್ನು ಬಿಸಿಯೇರಿಸಿದ ಡಾರ್ಡನೆಲ್ಸ ಜಲಸಂಧಿಯ ಪ್ರಶ್ನೆ ಕಳೆದ ವಾರ ಪುನಃ ಕಿಡಿ ಕಾರತೊಡಗಿತು. ಡಾರ್ಡನೆಲ್ಸ ಜಲಸಂಧಿ ಮತ್ತು ಬಂದರದ ನಿಯಂತ್ರಣ ಮತ್ತು ವ್ಯವಸ್ಥೆಯ ಒಪ್ಪಂದದಲ್ಲಿ ಬದಲಾವಣೆಯಾಗಬೇಕೆಂಬ ತನ್ನ ಬೇಡಿಕೆಯನ್ನು ಪುನಃ ಒಂದು ರಾಯಸದ ಮೂಲಕ ತುರ್ಕಿಯ ನೆನಪಿಗೆ ತಂದುಕೊಟ್ಟಿದೆ ರಶಿಯಾ. ಇದರಿಂದ ಮತ್ತೆ ರಶಿಯನ್ ಪ್ರಭಾವಪ್ರಸರಣದ ವಿರೋಧಿಗಳ ಹತ್ತಿರ ತುರ್ಕಿ ಓಡಾಡುವಂತಾಗಿದೆ. ಡಾರ್ಡನೆಲ್ಸ ನಿಯಂತ್ರಣದ ಅಧಿಕಾರ ಕೇವಲ ಕಪ್ಪು ಸಮುದ್ರದ ರಾಷ್ಟ್ರಗಳಿಗಿರಬೇಕು. ಅದರ ಸಂರಕ್ಷಣೆಯ ಹೊಣೆಯಲ್ಲಿ ರಶಿಯಾಕ್ಕೂ ಪಾಲು ಕೊಡಬೇಕು ಎಂಬದು ರಶಿಯಾದ ಬೇಡಿಕೆ. ಇದನ್ನು ಬ್ರಿಟನ ಅಮೇರಿಕೆಗಳು ವಿರೋಧಿಸಿ ತುರ್ಕಿಗೆ ರಾಯಸ ಕಳಿಸಿವೆ. ಅಲ್ಲದೆ ಬಲಪ್ರಯೋಗದ ಬೆದರಿಕೆ ತೋರಲು ಅಮೇರಿಕೆಯೊಂದು ದೊಡ್ಡ ಯುದ್ಧಹಡಗನ್ನು ಭೂಮಧ್ಯ ಸಮುದ್ರಕ್ಕೆ ಕಳಿಸಿದೆ. ಅವರ ಅವುಗಳು ಕಳಿಸಿದ ರಾಯಸ ತುರ್ಕಿಗೆ ಅಸಮಾಧಾನಕರವಾಗಿದೆಯಂತೆ. ರಶಿಯಾದೊಡನೆ ನೇರವಾಗಿ ಮಾತುಕತೆ ಮಾಡದೆ ಅಂತರ್‌ರಾಷ್ಟ್ರೀಯ ಪರಿಷತ್ತಿನಲ್ಲಿ ಪ್ರಶ್ನೆಯನ್ನು ಹಿಂಜುವ ಆಸೆ ಅದರದಾಗಿತ್ತು. ಆದರೆ ಡಾರ್ಡನೆಲ್ಸ ಸಮಸ್ಯೆಯನ್ನು ಅಂತರ್‌ರಾಷ್ಟ್ರೀಯವೆಂದೇ ಹೇಳಿದರೂ ಪಾಟ್ಸಡ್ಯಾಂ ಪರಿಷತ್ತಿನ ನಿರ್ಣಯಕ್ಕೆ ವ್ಯತಿರೇಕವಾಗದಂತೆ ರಶಿಯಾದೊಡನೆ ತುರ್ಕಿ ಮಾತುಕತೆನಡೆಸಬಹುದೆಂದು ಅಭಿಪ್ರಾಯಪಟ್ಟು ಬ್ರಿಟನ ಅಮೇರಿಕೆಗಳು ಸಲಹೆಯಿತ್ತದ್ದು ತುರ್ಕಿಯ ಅಧೀರತೆಗೆ ಕಾರಣವಾಗಿದೆ. ರಶಿಯಾದ ವಿರುದ್ಧ ಎಲ್ಲ ವಿಷಯದಲ್ಲಿಯೂ ಬ್ರಿಟನ ಅಮೇರಿಕೆಗಳನ್ನು ಎತ್ತಿ ಕಟ್ಟಬೇಕೆಂಬ ತುರ್ಕಿಯ ಬಯಕೆಗೆ ಇದರಿಂದ ಸ್ವಲ್ಪ ತಣ್ಣೀರು ಬಿದ್ದಂತಾಗಿದೆ.

## ಧಾರವಾಡ

ಗದಗ ಗೆಳೆಯರ ಬಳಗದ ಪರವಾಗಿ ಸಭೆಸೇರಿ ಬೆಳಗಾವಿಯಲ್ಲಿ ಶ್ರೀ ಅರವಿಂದ ಜೋಶಿ ವೊದಲಾದವರ ಮೇಲೆ ಮಾರಾಟಿಗರು ನಡೆಸಿದ ಹುಂಡಾಟಿಕೆಯನ್ನು ನಿಷೇಧಿಸಲಾಯಿತು.

ಧಾರವಾಡ ತಾಲೂಕಿನ ಮುಮ್ಮಿಗಟ್ಟಿಯಲ್ಲಿ ದಸರೆ ನಿಮಿತ್ತ ಕುರಿಕಡಿಯುವ ವಾಡಿಕೆಯಿತ್ತು. ಆದರೆ ಹಲವರ ಪ್ರಯತ್ನದಿಂದ ಈ ಸಲ ಕುರಿ ಕಡಿಯಲ್ಪಡಲಿಲ್ಲ.

ಹಾವೇರಿಯ ಪ್ರಸಿದ್ಧ ವಕೀಲರೂ ರಾಷ್ಟ್ರೀಯ ಕಾರ್ಯಕರ್ತರೂ ಆಗಿದ್ದ ಶ್ರೀ ಬಿ. ಎಂ. ಗಿರಜಿಯವರು ೪ ನೇ ತಾರೀಖಿನ ದಿವಸ ಅಕಸ್ಮಾತಾಗಿ ಕೋರ್ಟಿನಲ್ಲಿರುವಾಗಲೆ ಹೃದಯವಿಕಾರದಿಂದ ಶಿವೈಕ್ಯರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಮೃತರ ಆತ್ಮಕ್ಕೆ ಪರಮೇಶ್ವರನು ಶಾಂತಿಯನ್ನೀಯಲಿ.

ಮುಂಬಯಿ ಪ್ರಾಂತದ ೧೯೩೮ ನೇ ಇಸ್ವಿಯ ವೈದ್ಯಕ ಕಾಯದೆಯನ್ವಯ ಯೋಗ್ಯತೆಯುಳ್ಳ ವೈದ್ಯರು ತಮ್ಮ ಹೆಸರು ರಜಿಸ್ಟರ ಮಾಡಲಿಕ್ಕೆ ನೇರವಾಗಿ ಬೋರ್ಡಿನ ಸದಸ್ಯರಿಗೆ ಅರಿಕೆ ಮಾಡಿಕೊಳ್ಳಬೇಕೆಂದು ಬಿನ್ನವಿಸಲಾಗಿದೆ.

ಹುಬ್ಬಳ್ಳಿಯಲ್ಲಿ ವಿಜಯ ದಶಮಿಯ ಶುಭ ಮುಹೂರ್ತದಲ್ಲಿ ನೈಸರ್ಗಿಕ ಚಿಕಿತ್ಸಾಲಯವೊಂದು ಸ್ಥಾಪಿತವಾಗಿದೆ. ತೇಗೂರಮಠದ ಶ್ರೀ ಗುರುಸಿದ್ಧಯ್ಯನವರು ೧೯೩೬ ರಲ್ಲಿ ತಮ್ಮ ಸುಮಾರು ೫೦ ಸಾವಿರ ರೂಪಾಯಿ ಬೆಲೆ ಬಾಳುವ ಆಸ್ತಿಯ ಟ್ರಸ್ಟ ಮಾಡಿ ಅದರ ಬಡ್ಡಿಯೊಳಗಿಂದ ನೈಸರ್ಗಿಕ ಚಿಕಿತ್ಸಾಲಯವೊಂದನ್ನು ಸ್ಥಾಪಿಸಬೇಕೆಂದು ಮೃತ್ಯುಪತ್ರ ಮಾಡಿಟ್ಟಿದ್ದರು. ಅದರಂತೆ ಈಗ ಆ ಟ್ರಸ್ಟಿನವರು ಡಾ. ವಾರದ ಇವರ ನೇತೃತ್ವದಲ್ಲಿ ಕ್ರಿಶ್ಚನ್ ಕಾಲಿನಿಯಲ್ಲಿ ನೈಸರ್ಗಿಕ ಚಿಕಿತ್ಸಾಲಯವನ್ನು ತೆರೆದಿದ್ದಾರೆ. ಇಲ್ಲಿ ಬಡವರಿಗೆ ಪುಕ್ಕಟೆ ಉಪಚಾರ ಮಾಡಲಾಗುವದು.

ಹುಬ್ಬಳ್ಳಿಗೆ ಧರ್ಮಶಾಲೆ ಹಾಗು ನಗರ ಭವನದ ಅವಶ್ಯಕತೆಯಿದ್ದುದರಿಂದ ಮುನಸಿಪಾಲಟಿಯವರು ೯೦ ಸಾವಿರ ರೂಪಾಯಿಗಳನ್ನು ಇದಕ್ಕಾಗಿ ತೆಗೆದಿಟ್ಟಿದ್ದಾರೆ. ಈ ಕಟ್ಟಡಗಳ ಅತ್ಯುತ್ತಮ ನಕ್ಷೆ ತಗೆದುಕೊಟ್ಟವರಿಗೆ ಮುನಸಿಪಾಲಿಟಿಯವರು ೨೦೦ ರೂಪಾಯಿ ಬಹುಮಾನ ಕೊಡುವರು.

ಮುಂಬಯಿ ಸರಕಾರದವರು ನೇಮಿಸಿದ ಗ್ರಾಮೋದ್ಯೋಗ ಕಚೇರಿ ಹುಬ್ಬಳ್ಳಿಯ ತಾಡಪತ್ರಿ ಗಲ್ಲಿಯಲ್ಲಿ ೨೬ ನೇ ತಾರೀಖು ಅನೌಪಚಾರಿಕವಾಗಿ ಪ್ರಾರಂಭವಾಗಿದೆ.

ಮುಂಬಯಿ ಸರಕಾರದವರು ಕರ್ನಾಟಕದಲ್ಲಿ ಸ್ಥಾಪಿಸಲಿರುವ ಒಕ್ಕಲತನ ಕಾಲೇಜು ಧಾರವಾಡದಲ್ಲಿ ಸ್ಥಾಪಿತವಾಗುವದೆಂದು ಗೊತ್ತಾಗಿದೆ. ಬರುವ ಜೂನ ತಿಂಗಳಿಂದ ಈ ಕಾಲೇಜು ಪ್ರಾರಂಭವಾಗುವದು.

ಸೂಡಿಯಲ್ಲಿ ಜಿಲ್ಹಾ ಲೋಕಲ್ ಬೋರ್ಡಿನವರು ನಡೆಸುವ ಹಳ್ಳಿಯ ಆಸ್ಪತ್ರೆಯ ಕಟ್ಟಡಕ್ಕೆ ಶ್ರೀ ವೀರಭದ್ರಪ್ಪಾ ಕಂಬಳಾಳ ಇವರು ೧೦೦೧ ರೂ. ವಾಗ್ದಾನಮಾಡಿರುವರು. ಊರವರೆಲ್ಲ ಕೂಡಿ ೫೦೦೦ ರೂಪಾಯಿ ಕೊಡುವದಾಗಿ ಹೇಳಿರುವರು. ಇದಕ್ಕಾಗಿ ಒಂದು ಕಮೀಟಿ ಸ್ಥಾಪಿತವಾಗಿದೆ.

# ಕ ರ್ನಾ ಟ ಕ

## ಬೆಳಗಾವಿ

ಉಗರಗೊಳ್ಳ ಭಾಗದಲ್ಲಿ ನಡೆದ ಬರಗಾಲ ಕಾಮಗಿರಿಯಲ್ಲಿಯ ಕೆಲಸಗಾರರಿಗೆ ವಾರಕ್ಕೊಮ್ಮೆ ಕೂಲಿ ದೊರೆಯದ್ದರಿಂದ ಬಹಳ ತೊಂದರೆಯಾಗಿದೆ. ಅದುದರಿಂದ ವಾರಕ್ಕೊಮ್ಮೆ ಕೂಲಿ ದೊರೆಯುವಂತೆ ಏರ್ಪಡಿಸಬೇಕಾಗಿ ಕೋರಲಾಗಿದೆ.

ಬೈಲಹೊಂಗಲದಲ್ಲಿ ಪ್ಲೇಗ ಪ್ರಾರಂಭವಾಗಿದೆ. ಈ ವರೆಗೆ ೧೨೮ ಜನರಿಗೆ ರೋಗವು ಅಂಟಿಕೊಂಡಿದ್ದು ೪೬ ಜನ ಮರಣ ಹೊಂದಿರುರುವರು.

ಬೆಳಗಾವಿಯ ಕರ್ನಾಟಕ ಪತ್ರಿಕೆಯ ಸಂಪಾದಕ ಶ್ರೀ ಅ. ಅ. ಚಿಕ್ಕೋಡಿಯವರ ಪತ್ನಿ ಸೌ. ರಮಾಬಾಯಿಉರ್ಫಪದ್ಮಾವತಿಬಾಯಿಇವರು ೪ ನೇ ತಾರೀಕು ಮುಂಜಾನೆ ವಯಸ್ಸಿನ ೨೪ ನೇ ವರ್ಷದಲ್ಲಿ ಸ್ವರ್ಗಸ್ಥರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಇವರು ಅನೇಕ ದಿನಗಳಿಂದ ರಕ್ತಕ್ಷಯದಿಂದ ಬಳಲುತಿದ್ದರು. ಇವರು ೬ ತಿಂಗಳದ ಒಂದು ಹೆಣ್ಣು ಕೂಸನ್ನೂ ಬಿಟ್ಟು ಹೋಗಿರುವರು. ಪರಮಾತ್ಮನು ಮೃತರ ಆತ್ಮಕ್ಕೆ ಶಾಂತಿಯನ್ನೀಯಲಿ.

ಜಿಲ್ಹಾಧಿಕಾರಿಗಳ ಇಲ್ಲವೆ ಮಾಮಲೇದಾರರ ಅಪ್ಪಣೆಯಿಲ್ಲದೆ ಒಂದು ಹಳ್ಳಿಯಿಂದ ಇನ್ನೊಂದು ಹಳ್ಳಿಗೆ ಹಾಗು ಪರಸಗಡ ತಾಲೂಕಿನ ಹೊರಗೆ ಬರಗು ಸಾಗಿಸತಕ್ಕದ್ದಲ್ಲೆಂದು ಜಿಲ್ಹಾಧಿಕಾರಿಗಳು ಅಜ್ಞೆ ಹೊರಡಿಸಿರುವರು.

## ಉತ್ತರ ಕನ್ನಡ

ಕಾರವಾರ ಅಬಕಾರೀ ಪೋಲೀಸ ದಳವು ಗೋವೆಯ ಸರಹದ್ದಿಯಲ್ಲಿ ೧೦೦ ಇಲೆಕ್ಟ್ರಿಕ್ ಬಲ್ಬುಗಳನ್ನು ಮತ್ತು ಅದಕ್ಕೂ ಹೆಚ್ಚು ಸಾಯಕಲ ಚೇನುಗಳನ್ನು ಮತ್ತು ಸಾಯಕಲ್ಲಿನ ಬೇರೆ ಬಿಡಿ ಭಾಗಗಳನ್ನು ಜಪ್ತ ಮಾಡಿದ್ದಾರೆ. ಈ ಸಾಮಾನುಗಳು ಬೆಳಗಾವಿಯಿಂದ ಗೋವೆಗೆ ಮುಚ್ಚುಮರಿಯಿಂದ ಸಾಗಿಸಲ್ಪಡುತಿದ್ದವೆಂದು ತಿಳಿಯುತ್ತದೆ.

ಭಟಕಳದಲ್ಲಿ ಮೊದಲನೆ ತರಗತಿಯ ಬಂದರ ಕಟ್ಟಲು ಕೇಂದ್ರ ಸರಕಾರದ ಬಂದರ ಸಮಿತಿಯವರು ಸೂಚಿಸಿದ್ದನ್ನು ಮದ್ರಾಸ ಸರಕಾರದವರು ಬಲವಾಗಿ ವಿರೋಧಿಸಿರುವರೆಂದು ತಿಳಿಯುತ್ತದೆ. ಭಟಕಳ ಬಂದರವಾಗಬೇಕಾದರೆ ಕನ್ನಡಿಗರು ವಿಶೇಷ ಪ್ರಯತ್ನ ಮಾಡಬೇಕಾಗುವದು.

## ಬಳ್ಳಾರಿ

ಕೊಟ್ಟೂರಲ್ಲಿ ನಾಡಹಬ್ಬ ಒಳ್ಳೆ ವಿಜ್ರಂಭಣೆಯಿಂದ ಸಾಂಗವಾಯಿತು. ಬೇರೆ ಬೇರೆ ದಿನಗಳಲ್ಲಿ ವ್ಯಾಖ್ಯಾನಗಳು ಜರಗಿದವು.

ಮದ್ರಾಸ ಸರಕಾರದ ಕಂದಾಯ ಮಂತ್ರಿಗಳಾದ ಮಾನ್ಯ ಕಾರಂತರು ಬಳ್ಳಾರಿ ಜಿಲ್ಹೆಯಲ್ಲಿ ಸಂಚರಿಸಿ ಮದ್ಯಪಾನ ನಿಷೇಧದ ಪ್ರಚಾರ ಮಾಡಿದರು.

## ವಿಜಾಪುರ

ಮುಂಬಯಿ ಸರಕಾರದವರು ಮುಂಬಯಿ ಒಕ್ಕಲತನ ಉತ್ಪಾದನೆಯ ಪೇಟಿ ಕಾಯದೆಯನ್ವಯ ಬಾಗಲಕೋಟಿ ಪೇಟಿಯಲ್ಲಿ ಶೆಂಗಾ ಮತ್ತು ಶೆಂಗಾದ ಕಾಳಿನ ಮಾರಾಟವನ್ನು ನಿಯಂತ್ರಿಸುವವರಿದ್ದಾರೆಂದು ಪ್ರಸಿದ್ಧಿಸಲಾಗಿದೆ. ಈ ಬಗ್ಗೆ ತಕರಾರುಗಳಿದ್ದರೆ ಸೆಕ್ರೆಟರಿ ರೆವಿನ್ಯೂ ಡಿಪಾರ್ಟಮೆಂಟ ಇವರಿಗೆ ನವಂಬರ ೫ ನೇ ತಾರೀಕಿನೊಳಗಾಗಿ ಕಳಿಸಬೇಕು.

ವಿಜಾಪುರದಲ್ಲಿ ಪ್ಲೇಗು ಬೆಳೆಯುತ್ತಲಿದೆ. ಈಗಾಗಲೆ ೩೦ ಜನರಿಗೆ ಪ್ಲೇಗು ಬಂದು ೧೨ ಜನ ಸತ್ತಿದ್ದಾರೆ. ಮೈಲೀ ಚುಚ್ಚುವ ಕೆಲಸ ಭರದಿಂದ ಸಾಗಿದ್ದು ಸುಮಾರು ೬೦ ಸಾವಿರ ಜನ ವಸತಿಯುಳ್ಳ ಈ ನಗರದಲ್ಲಿ ಈಗಾಗಲೆ ೨೧ ಸಾವಿರ ಜನರಿಗೆ ಮೈಲೀ ಚುಚ್ಚಲಾಗಿದೆ. ಲಸ್ ಕಡಮೆ ಇದ್ದುದರಿಂದ ಮೈಲೀ ಚುಚ್ಚುವದಕ್ಕೆ ತಡೆಯಾಗಿದೆ.

ಖಜ್ಜೀಡೋಣಿಯ ಹತ್ತರ ಸಾವಿರ ರೂಪಾಯಿ ಬೆಲೆ ಬಾಳುವ ನೂಲನ್ನು ಬಸ್ಸಿನಲ್ಲಿ ಕಳ್ಳಪೇಟೆಯಿಂದ ಒಯ್ಯುವಾಗ ಮೌಲಾಸಾಬ ಫಣಿಬಂದ ಎಂಬವರು ಹಿಡಿದು ಜಪ್ತ ಮಾಡಿದ್ದಾರೆ.

ಗಲಗಲಿಯಿಂದ ೯ ಮೈಲು ದೂರದಲ್ಲಿರುವ ಮುಂಡಗನೂರ ಎಂಬ ಹಳ್ಳಿಗೆ ಕಳೆದ ತಿಂಗಳ ೨೦ ನೇ ತಾರೀಕು ರಾತ್ರಿ ೧೨ ಗಂಟೆಗೆ ಸುಮಾರು ೪೦ ಜನ ದರೋಡೆಗಾರರು ಮುತ್ತಿಗೆ ಹಾಕಿ ನಾಲ್ಕು ಮನೆಗಳಲ್ಲಿಯ ಸುಮಾರು ೫—೬ ಸಾವಿರ ರೂಪಾಯಿ ಬೆಲೆ ಬಾಳುವ ಬೆಳ್ಳಿ ಬಂಗಾರ ಮೊದಲಾದ ಆಭರಣಗಳನ್ನು ಒಯ್ದಿದ್ದುರುವರು. ದರೋಡೆಗಾರರು ಕಲ್ಲು ಒಗೆಯುತ್ತ ಊರನ್ನು ಹೊಕ್ಕು ಎಲ್ಲ ಮನೆಗಳ ಹೊರಚಿಲಕ ಹಾಕಿ ದರೋಡೆ ಮಾಡಿದರೆಂದು ತಿಳಿಯುತ್ತದೆ. ಪೋಲೀಸ ತಪಾಸಣೆ ನಡೆದಿದೆ.

ಬಾಗಲಕೋಟೆಯಲ್ಲಿ ೭೫ ಲಕ್ಷ ರೂಪಾಯಿ ಬಂಡವಲಿನ ದೊಡ್ಡದೊಂದು ಸಿಮೆಂಟ ಕಂಪನಿ ಹೊರಡುವ ಸಂಭವವಿದೆ. ಕರ್ನಾಟಕದ ಇಬ್ಬರು ಪ್ರಮುಖ ಗೃಹಸ್ಥರು ಈಗಾಗಲೆ ಸರಕಾರಕ್ಕೆ ಕಣಗಳ ಬಗ್ಗೆ ಅರ್ಜಿ ಮಾಡಿಕೊಂಡಿರುವರೆಂದು ವಿಶ್ವಸನೀಯವಾಗಿ ತಿಳಿಯುತ್ತದೆ.

## ಕನ್ನಡ ಸಂಸ್ಥಾನ

ಶಿವಮೊಗ್ಗಿಯ ಶ್ರೀ ಹಸೂಡಿ ವೆಂಕಟ ಶಾಸ್ತ್ರಿಗಳು ಕೂಡ್ಲಿ ಕ್ಷೇತ್ರದ ಶ್ರೀ ಶಾರದಾಂಬೆಯ ಮಂದಿರದ ಜೀರ್ಣೋದ್ಧಾರದ ಸಲುವಾಗಿ ೫ ಸಾವಿರ ರೂಪಾಯಿ ಕೊಡುಗೆ ಕೊಟ್ಟಿದ್ದಾರೆ.

ಮಿರಜಿಯ ಆಹಾರ ಮತ್ತು ಕಂಟ್ರೋಲ ಖಾತೆಗಳಲ್ಲಿ ನಡೆದ ಲಂಚಗುಳಿತನದ ಬಗ್ಗೆ ಯೋಗ್ಯ ವಿಚಾರಣೆ ನಡೆಸಲು ರಾಜಾಸಾಹೇಬರು ಪ್ರಜಾಪ್ರತಿನಿಧಿ ಪಕ್ಷದ ಮಂತ್ರಿಗಳಾದ ಶ್ರೀ ಕುರಣೆಯವರಿಗೆ ಕೇಳಿಕೊಂಡಿದ್ದಾರೆ. ಮಂತ್ರಿಗಳು ತಮ್ಮ ಕೆಲಸ ನೋಡಿಕೊಂಡು ಈ ವಿಚಾರಣೆಗೂ ಲಕ್ಷ ಹಾಕುವದು ತಮ್ಮಿಂದಾಗದೆಂದೂ ತಮ್ಮನ್ನು ಮಂತ್ರಿಪದದ ಹೊಣೆಗಾರಿಕೆಯಿಂದ ಮುಕ್ತಮಾಡಬೇಕೆಂದೂ ಶಾಸನ ಸಭೆಯ ತಮ್ಮ ಪಕ್ಷದ ಸದಸ್ಯರಿಗೆ ವಿನಂತಿಮಾಡಿಕೊಂಡಿದ್ದಾರೆಂದು ತಿಳಿಯುತ್ತದೆ.

ಹೈದರಾಬಾದ ಕಾಂಗ್ರೆಸ್ಸಿನ ಪ್ರಮುಖ ಕಾರ್ಯಕರ್ತರಾದ ಶ್ರೀ ಆಡವಿರಾವ, ಫಡನೀಸ, ಗಣಧಾಳ ನಾರಾಣಪ್ಪ, ನಾಗರಡ್ಡಿ ಲಿಂಗನಗೌಡರನ್ನು ಮತ್ತು ಆರ್ಯಸಮಾಜದ ಕಾರ್ಯಕರ್ತರಾದ ಶ್ರೀ ಮಾಣಿಕರಾವ ಇವರನ್ನು ರಾಯಚೂರ ಪೋಲೀಸರು ಬಂಧಿಸಿದ್ದಾರೆ. ಶ್ರೀ ನಾಗರಡ್ಡಿಯವರ ನಾಲ್ವರು ಸಂಗಡಿಗರನ್ನೂ ಜಾತೀಯ ಗಲಭೆಯೆಬ್ಬಿಸುವರೆಂಬ ಆರೋಪದಿಂದ ಬಂಧಿಸಿದ್ದಾರೆ. ಆಡವಿರಾಯರು ಉಪವಾಸ ಪ್ರಾರಂಭಿಸಿದ್ದರು. ಆದರೀಗ ಸಂಸ್ಥಾನ ಕಾಂಗ್ರೆಸ ಮುಂದಾಳುಗಳ ಬಿನ್ನಹದ ಮೇರೆಗೆ ಉಪವಾಸ ಬಿಟ್ಟುಗೊಟ್ಟಿರುವರೆಂದು ತಿಳಿಯುತ್ತದೆ.

ತುಮಕೂರು ಜಿಲ್ಹೆಯ ಕ್ಷಾಮಪೀಡಿತ ಆರು ಸ್ಥಳಗಳಲ್ಲಿ ಅನ್ನಛತ್ರಗಳನ್ನು ತಿಂಗಳಿಗೆ ೧೦೦೦ ರೂಪಾಯಿ ವೆಚ್ಚದಲ್ಲಿ ನಡೆಸಬೇಕೆಂದೂ ಕೆಂಗೇರಿ ಗುರುಕುಲ ಆಶ್ರಮದ ಬೆಸಿಕ್ ಇಂಗ್ಲಿಶ್ ವಿದ್ಯಾಭ್ಯಾಸಕ್ಕಾಗಿ ೫೦೦ ರೂಪಾಯಿ ಕೊಡಬೇಕೆಂದೂ ಜಿಲ್ಹಾ ಬೋರ್ಡ ಸಭೆಯಲ್ಲಿ ನಿರ್ಣಯಿಸಲಾಯಿತು.

ಶಿರಿಯಾಳಕೊಪ್ಪದಲ್ಲಿ ಈಸೂರ ದಿನಾಚರಣೆ ಬಹಳ ಸಂಭ್ರಮದಿಂದ ಕಳೆದ ತಿಂಗಳ ೨೭ ಕ್ಕೆ ಜರುಗಿತು. ಶ್ರೀ ಎಸ್ ಆರ್ ಗಿರಿಮಾಜಿಯವರ ಅಧ್ಯಕ್ಷತೆಯಲ್ಲಿ ಸಭೆಯಾಗಿ ಈಸೂರ, ಶ್ರವಣಬೆಳಗೊಳ ರಾಜಕೀಯ ಬಂದಿಗಳನ್ನು ಕೂಡಲೆ ಬಿಡುಗಡೆ ಮಾಡಬೇಕೆಂಬ ಗೊತ್ತುವಳಿ ಸ್ವೀಕೃತವಾಯಿತು.

ದಕ್ಷಿಣ ಸಂಸ್ಥಾನಗಳ ಒಕ್ಕೂಟವಾದ ನಂತರ ತಾವು ಪ್ರಜೆಗಳಿಗೆ ಖಾಸಗಿ ಖರ್ಚಿಗಾಗಿ ಕೆಲ ಯೋಗ್ಯ ಹಣ ಸ್ವೀಕರಿಸುವ ಹಕ್ಕು ಹಾಗು ಅಧಿಕಾರ ಇಟ್ಟುಕೊಂಡು ಉಳಿದೆಲ್ಲ ಅಧಿಕಾರ ಪ್ರಜೆಗಳಿಗಾಗಿ ವರ್ಗಾಯಿಸುವವಾಗಿ ಮಿರಜಿಯ ರಾಜಾಸಾಹೇಬರು ಆಶ್ವಾಸಿಸಿರುವರು.












# ಕೈನೂಲು ವಿರುದ್ಧ ಗಿರಣಿ ನೂಲು

ಹಿಂದುಸ್ತಾನದಲ್ಲಿ ಪ್ರಾಂತಿಕ ಮಂತ್ರಿಮಂಡಳಗಳು ಸ್ಥಾಪಿತವಾಗುವ ಕೆಲ ಕಾಲ ಮೊದಲು ಆಯಾ ಪ್ರಾಂತಗಳಿಗೆ ಗಿರಣಿ ಹಾಕಲು ಕದರುಗಳ ಪ್ರಮಾಣವನ್ನೆ ಗೊತ್ತುಪಡಿಸಿ ಕೊಡಲಾಗಿದೆಂಬ ಸುದ್ದಿಯನ್ನು ಕೇಳಿದ್ದೆ. ಯಾವದೊಂದು ಪ್ರಾಂತ ತನಗೆ ಕೊಡಲ್ಪಟ್ಟ ಕದರುಗಳನ್ನು ಸ್ವೀಕರಿಸದಿದ್ದರೆ ಬೇರೆ ಪ್ರಾಂತಗಳಿಗೆ ಅವನ್ನು ಒದಗಿಸಲಾಗುವದೆಂದೂ ಕೇಳಿದ್ದೆ. ಇದೀಗ ಪ್ರಾಂತಿಕ ಆಡಳಿತಗಳು ಭರದಿಂದ ನಡೆದಿವೆ. ಈ ಸರಕಾರಗಳು ರಾಷ್ಟ್ರೀಯ ಪ್ರಮಾಣದಲ್ಲಿ ಕೈನೂಲನ್ನು ಪ್ರೋತ್ಸಾಹಿಸುತಿರುವಾಗಲೆ ತಮ್ಮ ಪ್ರಾಂತಗಳಲ್ಲಿ ಹೊಸ ಗಿರಣಿಗಳ ಸ್ಥಾಪನೆಗೆ ಅವಕಾಶ ಕೊಡಬಲ್ಲವೊ ಎಂಬ ಪ್ರಶ್ನೆ ಉದ್ಭೂತವಾಗಿದೆ. ಮನಸಾ ಕೈನೂಲಿಗೆ ಪ್ರೋತ್ಸಾಹನೆ ಕೊಡಬೇಕಾಗಿದ್ದರೆ ಮೇಲಿನ ಪ್ರಶ್ನೆಗೆ ನನ್ನ ಉತ್ತರ ಸ್ಪಷ್ಟ ನಕಾರಾತ್ಮಕವಾಗಿಯೆ ಇರುವದು. ಹಿಂದುಸ್ತಾನದ ಭಟ್ಟೆಯ ಅವಶ್ಯಕತೆಯನ್ನು ಗಿರಣಿಗಳೇ ಪೂರೈಸಬಲ್ಲವು, ಪೂರೈಸಲಿಕ್ಕೆ ಬೇಕು ಎಂಬ ಮೂಲಭೂತ ವಿಚಾರ ಸರಣಿಯು ಈ ಕದರುಗಳ ಪೂರೈಕೆಯ ಹಿನ್ನೆಲೆಯಾಗಿದೆ. ಕೆಲ ದುರಾರಾಧ್ಯರ ಸಲುವಾಗಿ ಮಾತ್ರ ಕೈನೂಲಿನ ಬಟ್ಟೆಗಳಿಗೆ ಅವಕಾಶ ಕೊಡಬೇಕೆಂಬುದು ಸ್ಪಷ್ಟವಾಗುತ್ತದೆ. ಕಾಂಗ್ರೆಸ ಗೊತ್ತುವಳಿಯಲ್ಲಿ ಕೈನೂಲಿಗೆ ಈ ಬಗೆಯ ಸ್ಥಾನವಿರುವುದಿಲ್ಲ. ಅಖಿಲ ಭಾರತ ಚರಕ ಸಂಘವು ಪ್ರಗತಿಹೊಂದಿದ್ದರ ಬಗೆಯೂ ಹಾಗಿಲ್ಲೆಂಬುದು ನಿಶ್ಚಿತ. ಕೈನೂಲಿನ ಭವಿತವ್ಯ ಉಜ್ವಲವಾಗಿಲ್ಲ, ಆಗಲಾರದು ಎಂಬ ನಿರ್ಣಯಕ್ಕೆ ರಾಷ್ಟ್ರೀಯ ಸರಕಾರಗಳು ಬಂದಿದ್ದರೆ ಅಖಿಲ ಭಾರತ ಚರಕ ಸಂಘದವರು ಅನುಸರಿಸುತಿರುವ ಮಾರ್ಗದಲ್ಲಿ ಅವರು ಒಂದು ಪೈ ಕೂಡ ಹಾಳುಮಾಡತಕ್ಕದ್ದಲ್ಲ. ಆದರೆ ತದ್ವಿರುದ್ಧವಾಗಿ ಅ. ಭಾ. ಚ. ಸಂಘದವರಂತೆಯೆ ಕೈನೂಲಿನಲ್ಲಿ ವಿಶ್ವಾಸ ತಳೆದಿದ್ದರೆ ಕೆಲ ಮಟ್ಟಿಗೆ ಪ್ರಾರಂಭಿಕ ಹಾನಿಯಾದರೂ ಚಿಂತೆಯಿಲ್ಲ, ಅವರು ತಮ್ಮ ಕದರುಗಳ ಭಾಗವನ್ನು ಬಿಟ್ಟುಗೊಡತಕ್ಕದ್ದು. ಅದರಿಂದಾಗುವ ಹಾನಿ ಜನಸಾಮಾನ್ಯರ ಭಾವೀ ಲಾಭಕ್ಕಾಗಿಯೆ ಎಂಬುದು ಸುಸ್ಪಷ್ಟ.

ಕಾಂಗ್ರೆಸ್ ಪ್ರಾಂತಗಳೆಲ್ಲ ಒಂದೆ ಬಗೆಯ ಧೋರಣವನ್ನು ಅನುಸರಿಸಬೇಕೆಂದು ಕಾಂಗ್ರೆಸ್ ವರ್ಕಿಂಗ ಕಮೀಟಿ ಕನಿಷ್ಠ ಘೋಷಿಸಬಾರದೇಕೆ ಎಂಬ ಮತ್ತೊಂದು ಪ್ರಶ್ನೆಯೂ ಉದ್ಭೂತವಾಗಿದೆ. ಕಮೀಟಿ ಹಾಗು ಮಾಡಲಿಕ್ಕೆ ಯಾವ ನಿರ್ಬಂಧವೂ ಇಲ್ಲ. ಆದರೆ ಕಾಂಗ್ರೆಸ್ ಧೋರಣವನ್ನು ಒಮ್ಮೆಲ್ಲ ಅನೇಕ ಸಲ ಘೋಷಿಸಲಾಗಿದೆಂದೂ ಅದು ಹೇಳಬಲ್ಲದು. ಪ್ರತಿಯೊಂದು ಪ್ರಾಂತ ತನ್ನ ವಿಶ್ವಾಸವನ್ನು ಕಾಂಗ್ರೆಸ್ಸಿನ ತಕ್ಕಡಿಯಲ್ಲಿ ತೂಗಿ ನೋಡಬೇಕು. ವರ್ಕಿಂಗ ಕಮೀಟಿ ವಿವರಗಳಲ್ಲಿ ತೊಡಗಲಾರದು.

ಕೇಂದ್ರ ಸರಕಾರವಾದರೂ ಏಕೆ ಒಂದು ಧೋರಣವನ್ನು ಗೊತ್ತುಪಡಿಸಬಾರದೆಂದು ಮತ್ತೊಂದು ಪ್ರಶ್ನೆ. ಉತ್ತರ ಸುಸ್ಪಷ್ಟವಿದೆ. ಕೇಂದ್ರ ಸರಕಾರ ಅಖಿಲ ಭಾರತದ ಮತ್ತು ಎಲ್ಲ ಪಕ್ಷಗಳ ಪ್ರತಿನಿಧಿ. ಆದುದರಿಂದ ಅದು ಕಾಂಗ್ರೆಸ್ಸಿಗೇ ಮಾತ್ರ ಸಮ್ಮತವಿದ್ದ ಧೋರಣವನ್ನು ಹಾಕಿ ಕೊಡಲಾರದು. ಅದರಲ್ಲಿಯೂ ಪ್ರಾಂತಗಳ ಕಕ್ಷೆಯಲ್ಲಿ ಬರುವ ವಿಷಯಗಳ ಸಂಬಂಧದಲ್ಲಿಯಂತೂ ಅದು ಹೀಗೆಯೇ ಎಂದು ಹೇಳಲಾರದು. ಹಾಗೆ ಮಾಡುವದು ಪ್ರಾಂತಗಳ ಅಧಿಕಾರಗಳಲ್ಲಿ ಅನುಚಿತವಾಗಿ ಕೈ ಹಾಕಿದಂತಾಗುವದು.

ಈ ಎಲ್ಲ ದೃಷ್ಟಿಯಿಂದ ವಿಚಾರ ಮಾಡಿದರೆ ಮದ್ಯ ಪ್ರತಿಬಂಧ ಮತ್ತು ಉಳಿದ ವಿಷಯಗಳಲ್ಲಿಯಂತೆ ಖಾದಿಯ ಬಗ್ಗೆಯೂ ಪ್ರಾಂತಿಕ ಸರಕಾರಗಳು ತಮ್ಮ ಮಾರ್ಗವನ್ನನುಸರಿಸುವದು ವಿಹಿತವಾಗಿದೆಂದು ತೋರುತ್ತದೆ. ವರ್ಕಿಂಗ ಕಮೀಟಿಯವರು ತಮ್ಮ ನೆರವಿಗೆ ಬರಬೇಕೆಂದರೆ ಅವು ತೀರ ಆಯಶಸ್ವಿಯಾಗುವವು. ಕೇಂದ್ರ ಸರಕಾರಕ್ಕೆ ಆ ಬಗೆಯ ಇಚ್ಛೆ ಇದ್ದರೂ ಅಂಥ ಅಧಿಕಾರವಿರುವುದಿಲ್ಲ.

ಹೊಸದಿಲ್ಲಿ — ಮೋ. ಕ. ಗಾಂಧಿ
೩೦—೯—೪೬

# ದನಗಳ ಸುಧಾರಣೆ

ಸರದಾರ ದಾತಾರ ಸಿಂಗರು ಬರೆದ ಸುದೀರ್ಘ ಲೇಖದ ಸಾರ ಕೆಳಗಿನಂತಿದೆ. ಹಿಂದುಸ್ತಾನ ಮುಖ್ಯವಾಗಿ ಒಕ್ಕಲತನದ ನಾಡಾಗಿದ್ದುದರಿಂದ ದನಗಳ ಸುಧಾರಣೆಯೆಂದರೆ ಒಕ್ಕಲತನದ ಅಭಿವೃದ್ಧಿಯೆಂದು ಹೇಳಬೇಕಾಗುವದು. ಜಗತ್ತಿನ ದನಗಳ ಸಂಖ್ಯೆಯಲ್ಲಿ ಹಿಂದುಸ್ತಾನದಲ್ಲಿಯೆ ೧೦೦ಂಕ್ಕೆ ೨೯ ರಷ್ಟು ಸಂಖ್ಯೆಯಿದೆ. ಆದರೂ ಇಲ್ಲಿ ಪ್ರತಿಯೊಂದು ದನದ ಹಾಲಿನ ಉತ್ಪಾದನ ಪ್ರಮಾಣ ಬಹಳ ಕಡಿಮೆಯಿದೆ. ಇಲ್ಲಿ ಪ್ರತಿಯೊಂದು ಗೋ ಒಂದುದಿನಕ್ಕೆ ೭ ಔಂಸು ಹಾಲು ಕೊಡುತಿದ್ದರೆ ನ್ಯೂಝಿಲಂಡದಲ್ಲಿ ೫೬ ಔಂಸು ಮತ್ತು ಆಸ್ಟ್ರೇಲಿಯಾದಲ್ಲಿ ೪೫ ಔಂಸು ಹಾಲು ಹೊರಡುತ್ತದೆ. ಲೆಕ್ಕದಂತೆ ದಿನಾಲು ಕನಿಷ್ಠ ೨೦—೩೦ ಔಂಸು ಹಾಲು ಹೊರಡಬೇಕಾದುದು ಅವಶ್ಯ. ಅಂದರೆ ಉತ್ಪಾದನೆಯನ್ನು ಮುಮ್ಮಡಿ ಮಾಡಬೇಕಾಗುವದು. ಪ್ರತಿಯೊಂದು ಆಕಳಿನ ವಾರ್ಷಿಕ ಹಾಲಿನ ಉತ್ಪಾದನೆ ಸರಾಸರಿ ೭೫೦ ಪೌಂಡು ಇರುವದು. ದುರ್ದೈವದಿಂದ ಇದು ಪ್ರಮಾಣಕ್ಕಿಂತ ಬಹಳ ಕಡಿದೆ ಇರುವದು. ಇಷ್ಟು ಕಡಿಮೆ ಉತ್ಪಾದನ ಬರಬೇಕಾದರೆ ದನಗಳಿಗೆ ಪೌಷ್ಟಿಕ ಆಹಾರ ಸಿಕ್ಕದಿರುವದೆ ಕಾರಣ. ಸಾಧಾರಣವಾಗಿ ವರ್ಷಕ್ಕೆ ೨೬೦೦ ಲಕ್ಷ ಟನ್ ಕಣಕಿ ಮತ್ತು ೫೦೦ ಟನ್ ಹಿಂಡಿ ಹತ್ತೀಕಾಳು ಮೊದಲಾದ ಪೌಷ್ಟಿಕ ಪದಾರ್ಥ ಬೇಕಾಗಿರುವಾಗ ಇಲ್ಲಿ ಕೇವಲ ಅನುಕ್ರಮವಾಗಿ ೧೭೫೦ ಲಕ್ಷ ಟನ್ ಮತ್ತು ೩೦·೨೫ ಲಕ್ಷ ಟನ್ ಸಿಕ್ಕುತಿರುವವು. ಇದರ ಹೊರತು ಸಂಗ್ರಹದಲ್ಲಿ ಕಣಿಕೆ ಹಿಂಡಿ ಒಣಗಿಸುವಲ್ಲಿ, ರಾಶಿ ಮಾಡುವಾಗ ಆಹಾರ ಮತ್ತು ಕಣಕಿಯನ್ನು ಸಿದ್ಧಪಡಿಸುವಾಗ ಎಷ್ಟೋ ಮಾಲು ಹಾಳಾಗುತ್ತದೆ.

೧ ಯೋಗ್ಯ ಬಗೆಯ ಆಹಾರದ ಬಗ್ಗೆ ಸರದಾರರು ಕೆಳಗಿನ ಸೂಚನೆಗಳನ್ನು ಮಾಡುತ್ತಾರೆ.

ಅ) ಕಣಿಕೆ ಬೆಳೆಗಳನ್ನು ಹೆಚ್ಚಾಗಿ ಬಿತ್ತುವಂತೆ ಒಕ್ಕಲಿಗರಿಗೆ ಯೋಗ್ಯ ಪ್ರೋತ್ಸಾಹನೆ ಕೊಡಬೇಕು. ಮತ್ತು ಹೆಚ್ಚು ಕ್ಷೇತ್ರವನ್ನು ಇದಕ್ಕಾಗಿ ಪ್ರತ್ಯೇಕವಾಗಿಡುವಂತೆ ಯೋಜಿಸಬೇಕು. ಅತಿ ಪೌಷ್ಟಿಕ ಮತ್ತು ಹೆಚ್ಚು ಬೆಳೆ ಬರುವ ಹುಲ್ಲು ಬೆಳೆಸಬೇಕು. ಮತ್ತು ನಿರಂತರ ದೊರೆಯುವ ಮಾರೋಳಿ ಹುಲ್ಲು, ಗಲಗು ಶೀರಖಬ್ಬು ಮೊದಲಾದವುಗಳನ್ನು ಬೆಳಿಸಬೇಕು. ಅಲ್ಲದೆ ಅವರಿ, ಉದ್ದು ಮೊದಲಾದವುಗಳನ್ನು ಬೆಳಿಸಿ ಮಿಶ್ರಣವನ್ನು ಮಾಡಿ ದನಗಳಿಗೆ ಹಾಕಬೇಕು.

ಬ) ಕಣಿಕೆ ಬೆಳೆಗಳನ್ನು ಹೆಚ್ಚಿಸಬೇಕು ಮತ್ತು ಜವಳು ಮೊದಲಾದ್ದರಿಂದುಂಟಾಗುವ ಹಾನಿಯನ್ನು ತಪ್ಪಿಸಬೇಕು. ಅಲ್ಲದೆಹುಲ್ಲನ್ನು ಒಣಗಿಸುವ ಸುಧಾರಿಸಿದ ಪದ್ಧತಿಯನ್ನು ಜಾರಿಯಲ್ಲಿ ತರಬೇಕು.

ಕ) ಉತ್ತಮ ಮತ್ತು ವಿಶಾಲ ಹುಲ್ಲುಗಾವಲವನ್ನೇರ್ಪಡಿಸಬೇಕು. ಹುಲ್ಲುಗಾವಲಿನ ಕ್ಷೇತ್ರ ಬಹಳ ಮಟ್ಟಿಗೆ ಕಡಮೆಯಾದ್ದರಿಂದ ಇದ್ದ ಕ್ಷೇತ್ರದಲ್ಲಿಯೆ ನಿಯಂತ್ರಿತ ರೀತಿಯಿಂದ ದನಗಳನ್ನು ಮೇಯಿಸುವ ಯಾವದೊಂದು ಪದ್ಧತಿಯನ್ನು ಕೈಕೊಳ್ಳಬೇಕು. ಕೆರೆ ದಂಡೆಯಲ್ಲಿಯ ಹುಲ್ಲುಗಾವಲುಗಳ ಲಾಭ ಪಡೆಯಬೇಕು. ಈ ಸಂದರ್ಭದಲ್ಲಿ ಅರಣ್ಯದಲ್ಲಿರುವ ಭೂಮಿಗಳ ಉಪಯೋಗ ಮಾಡಿಕೊಳ್ಳುವದೂ ಮಹತ್ವದ್ದೆಂದು ಸರದಾರರು ಒತ್ತಿ ಹೇಳಿದ್ದಾರೆ. ಹಿಂದುಸ್ತಾನದಲ್ಲಿ ಸಾಗುವಳಿ ಅದ ಭೂಮಿ ೩೬೨೦ ಲಕ್ಷ ಎಕರೆ ಇದ್ದರೆ ೧೦೭೦ ಲಕ್ಷ ಎಕರೆ ಪ್ರದೇಶವು ಅರಣ್ಯವಾಗಿರುತ್ತದೆಂದು ಅಂದಾಜ ಮಾಡಲಾಗಿದೆ. ಈ ವಿಶಾಲ ವನಸಂಪತ್ತಿನ ಉಪಯೋಗ ಬಹಳ ಕಡಮೆ ಮಾಡಿಕೊಳ್ಳಲಾಗುತ್ತದೆ. ಉದಾಹರಣಾರ್ಥವಾಗಿ ಸಂಯುಕ್ತ ಪ್ರಾಂತದಲ್ಲಿ ಒಟ್ಟಾರೆ ಸುಮಾರು ೩೩೦ ಲಕ್ಷ ದನಗಳಲ್ಲಿ ಕೇವಲ ೧೦ ಲಕ್ಷ ದನಗಳು ಈ ಹುಲ್ಲುಗಾವಲಿನ ಲಾಭ ಪಡೆಯುತಿವೆ. ಹಿಂದುಸ್ತಾನದಲ್ಲಿ ಒಟ್ಟಾರೆ ದನಗಳ ಸಂಖ್ಯೆ ೯೭೦ ಲಕ್ಷ ಇದೆ. ಇವುಗಳಲ್ಲಿ ಸುಮಾರು ೪೫ ಲಕ್ಷ ದನಗಳು ಅರಣ್ಯದಲ್ಲಿಯ ಹುಲ್ಲುಗಾವಲಿನ ಪ್ರಯೋಜನ ಪಡೆಯುತಿವೆ. ಬ್ರಿಟಿಶ್ ಹಿಂದುಸ್ತಾನದಲ್ಲಿ ಈ ಅರಣ್ಯ ಪ್ರದೇಶವನ್ನು ಇಮ್ಮಡಿಸಬೇಕೆಂಬ ಯೋಜನೆ ನಡೆದಿದೆ. ಅರಣ್ಯ ಪ್ರದೇಶವನ್ನು ಹೆಚ್ಚಿಸಿದರೆ ಬೆಳೆ ಬೆಳಸಲಿಕ್ಕೆ ಘಾತಕ ಪರಿಣಾಮವನ್ನುಂಟು ಮಾಡುವದೆಂಬ ವಿಚಾರಸರಣಿ ಪೂರ್ಣ ತಪ್ಪಾದುದಿರುತ್ತದೆ. ಯೋಗ್ಯ ರೀತಿಯಿಂದ ದನಗಳನ್ನು ಹುಲ್ಲುಗಾವುಲುಗಳಲ್ಲಿ ಮೆಯಿಸಿದರೆ ಅಪಾಯವಾಗುವದಿಲ್ಲ. ಇಷ್ಟೇ ಅಲ್ಲ ಮೊದಲಿಗಿಂತ ಹೆಚ್ಚು ಪ್ರಮಾಣದಲ್ಲಿ ಬೆಳೆ ಬರುತಿದೆಂದು ಪ್ರಯೋಗಗಳಿಂದ ಸಿದ್ಧವಾಗಿದೆ. ಅರಣ್ಯ ಪ್ರದೇಶವನ್ನು ಶಾಸ್ತ್ರೀಯ ಮತ್ತು ಅರ್ಥಿಕ ಪದ್ಧತಿಯ ಮೇಲೆ ಹುಲ್ಲುಗಾವಲು ಪ್ರದೇಶಗಳನ್ನಾಗಿ ಮಾರ್ಪಡಿಸುವದು ಅವಶ್ಯವೇ ಆಗಿದೆ.

೨) ಒಳ್ಳೆ ಜಾಣ್ಮೆಯಿಂದ ದನಗಳ ಪೀಳಿಗೆ ಸುಧಾರಿಸುವದೂ ಮಹತ್ವದ ಪ್ರಶ್ನೆಯಾಗಿದೆ. ಇದರ ಬಗ್ಗೆ ಸರದಾರರ ಸೂಚನೆ ಹೀಗಿದೆ.

ಅ) ಆಯಾ ಸ್ಥಳಿಕ ಪರಿಸ್ಥಿತಿಗೆ ಅನುಗುಣವಾದ ಬೀಜದ ಹೋರಿಗಳನ್ನು ಪೂರಯಿಸಬೇಕು. ಸಾಯಂಕಾಲ ಸುತ್ತಲೂ ಬೇಲಿಯಿದ್ದ ಸ್ಥಳದಲ್ಲಿ ಈ ಹೋರಿಗಳನ್ನು ಹಾಕಿ ಅವುಗಳ ಜೋಪಾಸನೆ ಮುಂತಾದ್ದನ್ನು ಮಾಡಲು ರಕ್ಷಕರನ್ನು ನಿಯಮಿಸಬೇಕು. ಅವರ ಊಟದ ಹೊಣೆಯನ್ನು ಆಯಾ ಹಳ್ಳಿಗರು ಹೊರಬೇಕು. ದನಗಳ ಪೀಳಿಗೆ ರಕ್ಷಣೆಯಲ್ಲಿ ತರಬೇತಿ ಹೊಂದಿದವರನ್ನೆ ಈ ಕಾರ್ಯಕ್ಕೆ ನಿಯಮಿಸಬೇಕು. ಹೋರಿಗಳಿಗೆ ಪ್ರಥಮ ಚಿಕಿತ್ಸೆ ಮೊದಲಾದ್ದನ್ನು ಮಾಡಲು ಮತ್ತು ದನಗಳ ಬೇನೆ ಪ್ರಾರಂಭವಾದರೆ ಸಹಾಯ ಮಾಡಲು ಈ ಜನರು ತರಬೇತಿ ಹೊಂದಿದವರಿರಬೇಕು.

ಬ) ಅನಿಷ್ಟ ಹೋರಿಗಳ ತರಡು ಬಡೆದು ಬಿಡಬೇಕು.

ಕ) ಬೀಜದ ಹೋರಿಗಳ ಸಂಖ್ಯೆ ಹಿಂದುಸ್ತಾನದ ಅವಶ್ಯಕತೆಗಿಂತ ಬಹಳ ಕಡಮೆಯಿದೆ. ಕನಿಷ್ಠ ೧೦ ಲಕ್ಷ ಬೀಜದ ಹೋರಿಗಳಾದರೂ ಇರಲಿಕ್ಕೆ ಬೇಕು. ಪ್ರತಿ ನಾಲ್ಕು ವರುಷಗಳಿಗೊಮ್ಮೆ ಇವನ್ನು ಬದಲು ಮಾಡಬೇಕಾದ ಪ್ರತಿ ವರ್ಷ ೨½ ಲಕ್ಷದಷ್ಟು ಬೀಜದ ಹೋರಿಗಳು ಬೇಕಾಗುವವು. ಇದು ಸಾಧ್ಯವಾಗಬೇಕಾದರೆ ವಿಶಿಷ್ಟ ದನಗಳ ಕೇಂದ್ರಗಳಲ್ಲಿ ೬ ಲಕ್ಷಕ್ಕಿಂತ ಕಡಮೆಯಿಲ್ಲದಷ್ಟು ಆಕಳುಗಳನ್ನು ಮತ್ತು ೧೦ ಸಾವಿರ ಬೀಜದ ಹೋರಿಗಳನ್ನು ಇಡಬೇಕಾಗುವದು. ಆದರೆ ಹೀಗೆ ಮಾಡುವುದು ಶಕ್ಯವಿಲ್ಲದ್ದರಿಂದ ಮತ್ತು ಅರ್ಥಿಕ ದೃಷ್ಟಿಯಿಂದ ಸರಿಯಲ್ಲದ್ದರಿಂದ ಈಗಿದ್ದ ಗೋಶಾಲೆಗಳ ಮತ್ತು ಪಾಂಜರ ಪೋಳಿಗಳಂಥ ಸಂಘ ಸಂಸ್ಥೆಗಳ ಸಂಪೂರ್ಣ ಉಪಯೋಗ ಮಾಡಿಕೊಳ್ಳಬೇಕೆಂದು ಸರದಾರರ ಸೂಚನೆ. ಇವುಗಳನ್ನು ಯೋಗ್ಯ ರೀತಿಯಿಂದ ಪುನರ್ಘಟಿಸಿದ್ದಾದರೆ ಏನಿಲ್ಲೆಂದರೂ ೨೫ ಸಾವಿರ ಬೀಜದ ಹೋರಿಗಳು ಪ್ರತಿವರ್ಷ ಸಿಕ್ಕಬಹುದು. ಅಲ್ಲದ ಅಷ್ಟೇ ಎತ್ತುಗಳು ಮತ್ತು ಸುಧಾರಿಸಿದ ೫೦ ಸಾವಿರ ಹೆಣ್ಣು ಕರುಗಳು ಈ ಸಂಸ್ಥೆಗಳಲ್ಲಿ ತರಬೇತಿ ಹೊಂದಬಹುದು.

೩) ಸಾಂಸರ್ಗಿಕ ರೋಗಗಳು ಹಬ್ಬದಂತೆ ನೋಡಿಕೊಳ್ಳುವದು ಅತ್ಯಂತ ಮಹತ್ವದ್ದಾಗಿದೆ. ೩ ಕೋಟಿಗಿಂತ ಹೆಚ್ಚು ದನಗಳು ಬೇರೆ ಬೇರೆ ಇಂಥ ಬೇನೆಗಳಿಂದ ಪ್ರತಿವರ್ಷ ಸಾಯುತ್ತದೆ. ಈ ಬೇನೆ ಪ್ರತಿಬಂಧಕ ಮತ್ತು ನಿವಾರಕ ಉಪಾಯಗಳ ಕಡೆಗೆ ಯೋಗ್ಯ ಲಕ್ಷ ಪೂರೈಸಬೇಕು. ದನಗಳ ಜೋಪಾಸನೆಯ ಸಂಬಂಧದಲ್ಲಿ ಹಳ್ಳಿಗರನ್ನು ತರಬೇತಿ ಮಾಡುವುದಲ್ಲದೆ ಅವರಿಗೆ ಆವಶ್ಯಕ ವೈದಕೀಯ ಸಹಾಯವೂ ಸಿಕ್ಕುವಂತೆ ಏರ್ಪಡಿಸಬೇಕು.

ಹೊಸದಿಲ್ಲಿ — ಅ. ಕಾ.
೨೭—೯—೧೯೪೬

## ಪುಂಡತನದ ಪರಮಾವಧಿ

ಜಬ್ಬಲಪುರದ ಪತ್ರಲೇಖಕನೊಬ್ಬನು, ಸ್ಥಳೀಯ ಹೆಣ್ಣುಮಕ್ಕಳ ಕಾನ್ವೆಂಟಸಾಲೆಯ ಸಹಾಯಾರ್ಥವಾಗಿ ಸಂಘಟಿಸಲ್ಪಟ್ಟ ನಾಟಕ ಪ್ರದರ್ಶನವೊಂದರಲ್ಲಿ ಹಿಂದೂಗಳು ಕೆಲವರು ಮಾಡಿದ ಪುಂಡತನವನ್ನು ಬಣ್ಣಿಸಿದ್ದಾನೆ. ನಾಟಕವನ್ನು ಸಂಘಟಿಸಿದವನೂ ಒಬ್ಬ ಹಿಂದುವೆ. ಆ ಚಿಕ್ಕ ನಾಟಕದಲ್ಲಿ ನಟಿಸಿದವರೆಲ್ಲ ಕಾನ್ವೆಂಟಿನ ಹೆಣ್ಣುಮಕ್ಕಳೆ. ಕೊನೆಯಲ್ಲಿ ತಬ್ಬಲಿಯಾದ ಹುಡಿಗೆಯೊಬ್ಬಳು ಜಗತ್ತಿಗೆ ಬೇಸತ್ತು ದೇವರಲ್ಲಿ ಮೊರೆಯಿಡುವ ದೃಶ್ಯವಿತ್ತು. ಅಗ ದೇವದೂತರು ಕಾಣಿಸಿಕೊಂಡು ಕ್ರಿಸ್ತನಲ್ಲಿ ಭರವಸೆಯಿಡಲು ಉಪದೇಶಿಸುತ್ತಾರೆ. ಯೇಸುವನ್ನು ಕೊಂಡಾಡುವ ಪ್ರಾರ್ಥನಾಗೀತವೊಂದರೊಡನೆ ನಾಟಕ ಸಮಾಪ್ತಿಯಾಗುತ್ತದೆ. ಇದರಿಂದ ಗೊಂದಲಕ್ಕೆ ಸಂಕೇತ ಕೊಟ್ಟಂತಾಯಿತು. ಗೊಂದಲವನ್ನು ಹುಟ್ಟಿಸಿದ ಹಿಂದುಗಳು ಕ್ರಿಸ್ತಧರ್ಮದ ವಿರುದ್ಧ ತಿರುಬೊಬ್ಬೆಯನ್ನೆಬ್ಬಿಸಿಬಿಟ್ಟರು. ನಾಟಕದ ಸಂಘಟಕನು ಮಾತಾಡಲು ಪ್ರಯತ್ನಿಸಿದರೆ ಕೂಗಾಟದಲ್ಲಿ ಅವನ ದನಿಯೇ ಕೇಳಿಸದಾಯಿತು. ತಿಕೀಟುಗಳಿಗಾಗಿ ಕೊಟ್ಟ ಹಣವನ್ನು ತಿರುಗಿ ಬೇಡಲಾಯಿತು. ಯೇಸು ಕ್ರಿಸ್ತನ ಬದಲು ಶ್ರೀಕೃಷ್ಣನನ್ನು ಕೊಂಡಾಡುವ ಗೀತವನ್ನು ಹಾಡಿದ್ದರೆ ಈ ಗೊಂದಲ ಏಳುತಿತ್ತೆ? ಎಂದು ಪತ್ರಲೇಖಕನು ಕೇಳುತ್ತಾನೆ.

ಲೇಖಕನು ಹೇಳುವದು ನಿಜವಾಗಿದ್ದ ಪಕ್ಷದಲ್ಲಿ ಮೇಲೆ ಬಣ್ಣಿಸಿದ ವರ್ತನೆ ತೀರ ಅಯೋಗ್ಯವಾಗಿತ್ತು. ಅದು ಪರಮಾವಧಿ ಅಸಹಿಷ್ಣುತೆಯ ದ್ಯೋತಕವಾಗಿತ್ತು. ತಮ ಭಾವನೆಗೆ ಸರಿಹೋಗದ ವಿಷಯಗಳು ಸೇರಿಕೆಯಾಗದವರು ಅವುಗಳಿಗೆ ಸಹಾಯ ಮಾಡಬೇಕಾಗಿಲ್ಲ; ಆದರೆ ತಮಗೆ ರುಚಿಸದ ಸಂಗತಿಗಳು ಕಂಡರೆ ಮನುಷ್ಯರಿಗೆ ಒಪ್ಪದ ರೀತಿಯಲ್ಲಿ ವರ್ತಿಸುವದು ಅಸಭ್ಯತೆಯೇ ಸರಿ.

ಹೊಸದಿಲ್ಲಿ — ಮೋ. ಕ. ಗಾಂಧಿ
೮—೧೦—೪೬

# ಮಣ್ಣಿನ ಗುಡಿಸಲುಗಳು

ಹಿಂದುಸ್ತಾನ ಮಣ್ಣಿನ ಮನೆಗಳಲ್ಲಿ ವಾಸಿಸುತ್ತದೆ. ಈ ದೇಶದಲ್ಲಿ ಮಣ್ಣೇ ಎಲ್ಲಕ್ಕಿಂತ ಸರ್ವಸಾಮಾನ್ಯವಾದ ಕಟ್ಟಡದ ವಸ್ತು. ಇದು ಅನಂತ ಕಾಲದ ವರೆಗಲ್ಲದಿದ್ದರೂ ಎಷ್ಟೋ ತಲೆಮಾರುಗಳ ವರೆಗೆ ಹೀಗೆಯೇ ಉಳಿಯುವದೆಂದು ಧೈರ್ಯದಿಂದ ಹೇಳಬಹುದು. ಅನ್ನ ವಸ್ತ್ರಗಳ ಸಮಸ್ಯೆಗಳನ್ನು ಪ್ರಯತ್ನ ಪೂರ್ವಕವಾಗಿ ತುಡುಕುತಿರುವಾಗ ವಸತಿ ಸಮಸ್ಯೆಯನ್ನು ನಿಧಾನವಾಗಿ ವಿಚಾರಿಸಲಾಗುತಿದೆ. ಏಕೆಂದರೆ, ಅದು ಅಷ್ಟು ಅವಸರದ್ದಾಗಿ ತೋರಿಲ್ಲ. ಅದು ಹೆಚ್ಚು ಕಠಿನವೂ ಹೌದು.

ಆದರೂ ಜನರ ಆರೋಗ್ಯಕ್ಕಾಗಿ ವಸತಿ ಸಮಸ್ಯೆಯನ್ನು ಆಮೂಲಾಗ್ರ ಬಿಡಿಸುವದು ಅವಶ್ಯವಾಗಿದೆ. ೭ ಲಕ್ಷ ಹಿಂದೀ ಹಳ್ಳಿಗಳನ್ನು ಪುನರ್ನಿರ್ಮಿಸುವ ಪ್ರಚಂಡ ಕಾರ್ಯವನ್ನು ಕೈಕೊಳ್ಳಲೇ ಬೇಕಾಗಿದೆ. ಇಟ್ಟಿಗೆ-ಕಲ್ಲು, ಸಿಮೆಂಟ - ಪ್ಲಾಯವುಡ್, ಅಸ್ಬೆಸ್ಟೋಸ್ — ಲೋಹ, ಇವುಗಳಿಂದ ಮನೆಕಟ್ಟುವ ಯೋಜನೆ ಮಾಡುವ ಶ್ರೀಮಂತಿಕೆ ಹಿಂದುಸ್ತಾನದ್ದಲ್ಲ. ಮಣ್ಣೇ ಸಾರ್ವತ್ರಿಕವಾಗಿ ಕಟ್ಟಡದ ವಸ್ತುವಾಗಬಲ್ಲದೆಂದು ವ್ಯವಹಾರಜ್ಞಾನವುಳ್ಳವರಿಗೆ ಹೊಳೆಯದಿರದು. ಆದರೆ ಈಗಿರುವ ಮಣ್ಣಿನ ಮನೆಗಳೇ ಹಿಂದುಸ್ತಾನಕ್ಕೆ ಮುಂದಿಗೂ ಮಾದರಿಯಾಗಬಾರದು. ಮನೆಗಳು ವಿಶಾಲವಾಗಿಯೂ ಪ್ರಕಾಶಮಯವಾಗಿಯೂ ಹಿರಣವಾಗಿಯೂ ಆರೋಗ್ಯಕರವಾಗಿಯೂ ಇರಬೇಕು. ಇಂಥ ಮನೆಗಳನ್ನು ಮಣ್ಣಿನಿಂದ ಕಟ್ಟಲಾದೀತೇ?

ಸುದೈವದಿಂದ ಈ ಪ್ರಶ್ನೆಗೆ ಹೌದೆಂದು ಉತ್ತರ ಕೊಡಬಹುದಾಗಿದೆ. ಮಣ್ಣಿನ ಮನೆಗಳನ್ನು ಕಟ್ಟುವದರಲ್ಲಿಯೂ ಸುಧಾರಿಸಿದ ಪದ್ಧತಿಯುಂಟು. ಮಣ್ಣಿನ ಗೋಡೆಗಳನ್ನು ಕಟ್ಟುವ ಬಹಳ ಪ್ರಾಚೀನ ರೀತಿಯೊಂದು ಜಗತ್ತಿನಲ್ಲೆಲ್ಲ ಪ್ರಚಲಿತವಾಗಿದೆ. ಸ್ಪೇನದ ಒಕ್ಕಲಿಗರು ಈ ರೀತಿಯಲ್ಲಿ ಹ್ಯಾನಿಬಾಲನ ಕಾಲದಲ್ಲಿಯೇ ತಮ್ಮ ಹಳ್ಳಿಗಳನ್ನು ಕಟ್ಟುತಿದ್ದರು. ಇಂದಿಗೂ ಕೊಲೆಕೊಡೋದ ನಸತಿಗಾರರು ಅದೇ ಬಗೆಯಲ್ಲಿ ಮನೆಗಳನ್ನು ಕಟ್ಟಿಕೊಳ್ಳುತಿದ್ದಾರೆ. ಫ್ರಾನ್ಸಿನಲ್ಲಿ ಇಂಥ ಎಷ್ಟೋ ಮನೆಗಳಿವೆ. ಶತಮಾನಗಳ ಹಿಂದೆ ಕಟ್ಟಿದ ಈ ಮನೆಗಳು ಈಗಲೂ ಗಟ್ಟಿಮುಟ್ಟಾಗಿವೆ. ಚೀನದಲ್ಲಿಯೂ ಹಾಗೆಯೆ. ಹಿಂದುಸ್ತಾನದಲ್ಲಿ ಕೂಡ ಅದೇ ತತ್ವವನ್ನು ಅನುಸರಿಸಿ ಪುರಾತನ ರಾಜಮಹಾರಾಜರು ಕೋಟೆಗಳನ್ನು ಕಟ್ಟಿದ್ದರು. ಆದರೆ ಅವರ ಪದ್ಧತಿ ಭಿನ್ನವಾಗಿತ್ತು.

ಮೇಲೆ ಬಣ್ಣಿಸಿದ ಪದ್ಧತಿಯ ಸಾಧಕಗಳನ್ನು ಸರಿಯಾಗಿ ಅರಿತುಕೊಳ್ಳಬೇಕಾದರೆ ಮಣ್ಣಿನ ಗೋಡೆ ಕಟ್ಟುವ ಸಾಮಾನ್ಯ ಪದ್ಧತಿಯನ್ನು ಮೊದಲು ಪರಿಶೀಲಿಸೋಣ.

ಮಣ್ಣನ್ನು ಅಗೆದು, ಹೆಂಟೆಗಳನ್ನೊಡೆದು ಪುಡಿ ಮಾಡಿದ ನಂತರ ಅದನ್ನು ನೀರಿನಿಂದ ನೆನೆಸುತ್ತಾರೆ. ಕೆಲವೊಮ್ಮೆ ಸ್ವಲ್ಪ ಕರಡವನ್ನು ಅದಕ್ಕೆ ಸೇರಿಸುವದೂ ಉಂಟು. ಮಣ್ಣು ನೀರುಗಳ ಈ ಮಿಶ್ರಣವನ್ನು ರಾತ್ರಿಯಲ್ಲಿ ಹಾಗೆಯೇ ಬಿಟ್ಟು ಆಮೇಲೆ ಗೋಡೆಯನ್ನು ಪದರು ಪದರಾಗಿ ಏರಿಸುತ್ತಾರೆ. ಸಾಮಾನ್ಯವಾಗಿ ಮಣ್ಣಿನ ಗೋಡೆಗಳು ಮೇಲೇರಿದಂತೆ ತೆಳ್ಳತೆಳ್ಳಗಾಗುತ್ತ ಹೋಗುವವು. ಮಣ್ಣಿನಲ್ಲಿ ಬಹಳ ನೀರು ಬೆರೆತಿರುವದರಿಂದ ಅದು ಆರಿದಾಗ ಗೋಡೆಯಲ್ಲಿ ಲೆಕ್ಕವಿಲ್ಲದಷ್ಟು ಬಿರುಕಗಳು ಕಾಣಿಸಿಕೊಳ್ಳುವವು. ಅದರಿಂದ ಗೋಡೆಯ ಬಲ ಸ್ವಲ್ಪಮಟ್ಟಿಗೆ ಕಡಿಮೆಯಾಗುವದಲ್ಲದೆ ಕ್ರಿಮಿ ಕೀಟಕಗಳ ಪ್ರವೇಶಕ್ಕೂ ಅವಕಾಶ ದೊರೆಯುತ್ತದೆ.

ಇದಕ್ಕಿಂತ ತುಸು ಸುಧಾರಿಸಿದ ಮಣ್ಣಿನ ಗೋಡೆ ಕಟ್ಟುವ ಉಪಾಯದಲ್ಲಿ ಮಣ್ಣಿನ ಇಟ್ಟಿಗೆ ಮಾಡಿ ಅದನ್ನು ಬಿಸಿಲಲ್ಲಿ ಒಣಗಿಸಿ ಆ ಮೇಲೆ ಅವುಗಳಿಂದ ಗೋಡೆ ಏರಿಸುವರು.

ಇವೆರಡೂ ಪದ್ಧತಿಗಳಲ್ಲಿ ಗೋಡೆ ದುರ್ಬಲವೂ ಛಿದ್ರಮಯವೂ ಆಗಿರುವದು. ಸಾಮಾನ್ಯವಾಗಿ ಅದನ್ನು ಹಾಗೆಯೇ ಬಿಡುತ್ತಾರೆ. ಒಮ್ಮೊಮ್ಮೆ ಅದಕ್ಕೆ ಸೆಗಣಿಯನ್ನೋ ಸುಣ್ಣವನ್ನೋ ಸಾರಿಸುವದೂ ಉಂಟು.

ಈಗ ಸೂಚಿಸುವ ಪದ್ಧತಿ ಮೇಲಿನದಕ್ಕಿಂತ ಬಹಳ ಭಿನ್ನವಾಗಿದೆ. ಕೈಯಿಂದ ಬಹಳ ಬಲವಾಗಿ ಒತ್ತಿದಾಗ ಮಣ್ಣು ಮುದ್ದೆಯಾಗಿ ನಿಲ್ಲಲು ಅವಶ್ಯವಿದ್ದಷ್ಟು ಮಾತ್ರ ನೀರನ್ನು ಸೇರಿಸಬೇಕು. ಇದರಲ್ಲಿ ಆದಷ್ಟು ಕಡಿಮೆ ನೀರು ಸೇರಿಸುವದೇ ಬಹಳ ಮುಖ್ಯ. ಅತ್ಯವಶ್ಯವಾದುದಕ್ಕಿಂತ ಸ್ವಲ್ಪವೂ ಹೆಚ್ಚು ಬೆರಸಬಾರದು.

ಅದಕ್ಕೆ ಬೇಕಾದ ಮಣ್ಣು ಆವೆಮಣ್ಣು, ಮಳಲು ಮತ್ತು ಹರಳು ಕಲ್ಲು ಇವುಗಳ ಮಿಶ್ರಣ. ಸಾಮಾನ್ಯವಾದ ಕೆಮ್ಮಣ್ಣು ಬಹಳ ಉತ್ತಮ. ಮಣ್ಣಿನಲ್ಲಿ ಮಳಲು ಹೆಚ್ಚಾಗಿದ್ದರೆ, ಅದಕ್ಕೆ ಆವೆ ಮಣ್ಣು ಸೇರಿಸಿ ಸುಧಾರಿಸಬಹುದು. ಆವೆ ಮಣ್ಣಾದರೆ ಮಳಲು ಮತ್ತು ಕಲ್ಲ ಹರಳು ಕೂಡಿಸಬೇಕು. ಸಾಧಾರಣವಾಗಿ ಗುಡ್ಡದ ಬುಡದಲ್ಲಿ ಸಿಗುವ ಮಣ್ಣೇ ಅತ್ಯುತ್ತಮವಾಗಿರುತ್ತದೆ. ಅದರಲ್ಲಿ ರೇವೆ ಮಣ್ಣೂ ಮಳಲೂ ಹರಳುಗಳೂ ಬೆರೆತಿರುತ್ತವೆ. ಆದರೆ ಈ ಪದ್ಧತಿಯನ್ನು ಬಗೆ ಬಗೆಯ ಮಣ್ಣುಗಳಿಗೆ ಹೊಂದಿಸಿಕೊಳ್ಳಬರುತ್ತದೆ. ಪ್ರಾಣಿಜನ್ಯ ಹಾಗೂ ಸಸ್ಯಜನ್ಯ ವಸ್ತುಗಳನ್ನು ಆದಷ್ಟು ಮಟ್ಟಿಗೆ ದೂರವಿಡಬೇಕು. ಎಲ್ಲ ಬೇರು ಕರಡ ಮೊದಲಾದವುಗಳನ್ನು ಎಚ್ಚರದಿಂದ ತೆಗೆದೊಗೆಯಬೇಕು.

ಎರಡು ಸಮದೂರವಾದ ಹಲಗೆಗಳ ನಡುವೆ ಮಣ್ಣನ್ನು ಸೇರಿಸಿ ವಿಶಿಷ್ಟ ಸಾಧನಗಳಿಂದ ತಿರುತಿರುಗಿ ಬಡಿದು ಜಡಿದು ಮಣ್ಣನ್ನು ನುಗಿಸುವದೇ ಇದರ ಮುಖ್ಯ ತತ್ವ. ನೀರು ಬರಿ ತೇವಗೊಳಿಸುವ ಕೆಲಸವನ್ನಷ್ಟೇ ಮಾಡುವದು. V ಆಕಾರದ ಹೊಡೆ ಮಣೆಯಿಂದ ಮತ್ತೆ ಮತ್ತೆ ಕುಟ್ಟುವದರಿಂದ ಮಣ್ಣಿನ ರಾಶಿಯೆಂಬುದು ಏಕಪಿಂಡವಾಗಿ ಕಲ್ಲುಗಟ್ಟುವದು. ಶಕ್ತಿಯಲ್ಲಿ ಇದು ಲ್ಯಾಟರಾಯಿಟ ( laterite ) ಗೂ ಮೆತ್ತನ್ನ ಸುಣ್ಣದ ಕಲ್ಲಿಗೂ ನಡುವೆ ನಿಲ್ಲಬಹುದು. ಈ ಗಟ್ಟಿಗೊಂಡ ಮಣ್ಣು ಕಾಲಕಳೆದಂತೆ ಗಟ್ಟಿಮುಟ್ಟಾಗುತ್ತ ಹೋಗಿ ಜಡಿ ಮಳೆ ಇಲ್ಲವೆ ಹರಿಯುವ ನೀರಿನ ನೇರವಾದ ಹೊಡೆತಕ್ಕೆ ಸಿಲುಕದಿದ್ದರೆ ಶತಮಾನಗಳ ವರೆಗೆ ಬಾಳುವದು.

ಇದಕ್ಕೆ ಬೇಕಾದ ಸಾಧನಗಳು ಬಹಳ ಕಡಿಮೆ ಮತ್ತು ಸುಲಭ ಅವನ್ನು ಹಳ್ಳಿಯ ಕೆಲಸಗಾರನೂ ಬೇಕಾದಂತೆ ಮಾಡಿಕೊಡಬಲ್ಲ. ಒಂದು ಚೌಕು, ಒಂದು ಗುಂಡು, ಮಟ್ಟಲಗಿ ವಿವಿಧ ಆಕಾರಗಳ ಮಣ್ಣು ಬಡಿಯುವ ಮಣೆಗಳು ಮತ್ತು ಹಲಗೆಯಿಂದ ಮಾಡಿ ಕಬ್ಬಿಣದ ಇಲ್ಲವೆ ಕಟ್ಟಿಗೆಯ ಕಟ್ಟುಗಳಿಂದ ಸಂದುಗೂಡಿಸಿದ ಗೋಡೆಗಳ ಮತ್ತು ಮೂಲೆಗಳ ಆಕೃತಿಗಳು. ಇಷ್ಟೆ ಅದಕ್ಕೆ ಅವಶ್ಯಕ ಸಾಧನಸಂಪತ್ತಿ.

ಕಲ್ಲಿನ ಇಲ್ಲವೆ ಇಟ್ಟಿಗೆಯ ತಳಕಟ್ಟಿನ ಮೇಲೆ (ಹರಿಯುವ ನೀರಿನ ಹೊಡೆತದಿಂದ ಗೋಡೆಯನ್ನು ರಕ್ಷಿಸುವಗೋಸ್ಕರ) ಸಾಮಾನ್ಯವಾಗಿ ಹತ್ತಡಿ ಉದ್ದ ಮೂರಡಿ ಅಗಲದ ಹಲಗೆಗಳನ್ನು ಗೋಡೆ ಎಷ್ಟು ದಪ್ಪ ಬೇಕೋ ಅಷ್ಟು ಎಡೆಬಿಟ್ಟು ಸಮದೂರದಲ್ಲಿ ನಿಲ್ಲಿಸುವದು. ಮೊದಲು ಮಾಡಿ ತುಸು ನೀರು ಚಿಮುಕಿಸಿದ ಮಣ್ಣನ್ನು ಆ ಹಲಗೆಗಳ ಸಂದಿನಲ್ಲಿ ಪದರು ಪದರಾಗಿ ತುರಕಬೇಕು. ಪ್ರತಿ ಪದರಿನ ದಪ್ಪ ಸುಮಾರು ಎರಡಿಂಚು ಇರಬೇಕು. ಅದನ್ನು ಹೊಡೆ ಮಣೆಯಿಂದ ಚನ್ನಾಗಿ ಜಡಿದು ಜಡಿದು ಸುಮಾರು ಮುಂಚಿನ ಅರ್ಧ ದಪ್ಪಕ್ಕೆ ಇಳಿಸಬೇಕು. ಆ ಮೇಲೆ ಮತ್ತೊಂದು ಪದರು ಮಣ್ಣು ತುಂಬಿ ತಿರುಗಿ ಜಡಿಯಬೇಕು. ಹೀಗೆಯೆ ಮಾಡುತ್ತ ಮಾಡುತ್ತ ಗೋಡೆಯ ಒಂದು ಭಾಗ ಏರುವದು. ಹಲಗೆಗಳ ನಡುವಣ ಎಡೆಯೆಲ್ಲ ಮುಚ್ಚಿದ ಮೇಲೆ ಅವುಗಳನ್ನು ಬೇರೆಡೆಗೆ ಸರಿಸಿ ಹಿಂದಿನಂತೆಯೆ ಗೋಡೆಯ ಇನ್ನೊಂದು ಭಾಗವನ್ನು ಕಟ್ಟುವದು, ಮೂಲೆಗಳನ್ನೂ ನಡುಗೋಡೆಗಳನ್ನೂ ಕಟ್ಟಲು ಮೇಲಿನ ಅಚ್ಚುಗಳಿಗೆ ಅವಶ್ಯಕ ಆಕೃತಿಯ ಮೂಲೆ ಅಚ್ಚುಗಳನ್ನು ಸಂದುಗೂಡಿಸಿ ಸಿದ್ಧಗೊಳಿಸಬಹುದು.

ನನೆಸಿದ ಸುಣ್ಣವನ್ನೂ ಮಳಲನ್ನೂ ಸೇರಿಸಿ ಗೋಡೆಯ ಸಾರಣಿಗೆ ಮಾಡಿದರೆ ಮಳೆಯಿಂದ ಒಳಿತಾಗಿ ರಕ್ಷಿಸುವದೆಂದು ಅನುಭವದಿಂದ ಗೊತ್ತಾಗಿದೆ. ಮಳೆ ಬಹಳ ಹೆಚ್ಚಾಗಿರುವಲ್ಲಿ ಗೋಡೆಗಳನ್ನು ಹೊರಗಿನಿಂದ ತಾರು ಅಥವಾ ಕಲ್ಲುರಾಳ ಬಳಿದು ನೀರು ಒಳಸೇರದಂತೆ ಮಾಡಿ ಮೇಲೆ ಸುಣ್ಣ ಹಚ್ಚಿ ಚಂದ ಮಾಡಬಹುದು.

ಈ ಸಾಧನ, ಅಚ್ಚುಗಳಿಂದ ಅನೇಕ ಮನೆಗಳನ್ನು ಕಟ್ಟಬಹುದು. ಅವುಗಳನ್ನು ಹಳ್ಳಿಯ ಪಂಚಾಯತಿಯೇ ಸಿದ್ಧ ಮಾಡಿಸಿ ಮನೆ ಕಟ್ಟಬೇಕೆನ್ನುವವರಿಗೆ ಎರವು ಕೊಡಬಹುದು. ಕೆಲಸವನ್ನೆಲ್ಲ ಸ್ವಂತ ಕುಟುಂಬದ ಶ್ರಮದಿಂದಲೆ ಮಾಡಬಹುದು. ಅವಶ್ಯ ಬಿದ್ದರೆ ಪರಸ್ಪರ ಸಹಾಯದ ಕರಾರಿನಿಂದ ನೆರೆಹೊರೆಯರ ನೆರವು ತೆಗೆದುಕೊಳ್ಳಲು ಅಡ್ಡಿಯಿಲ್ಲ. ಕಟ್ಟಡ ಅಗ್ಗವಾಗಿಯೂ ಬಲಿಷ್ಠವಾಗಿಯೂ ತಾಳಿಕೆ ಬರುವಂತೆಯೂ ಆಗುವದು. ಅದನ್ನು ಎತ್ತರವಾಗಿ, ನೆಟ್ಟಗೆ ಮತ್ತು ಚೌಕಾಗಿ ಕಟ್ಟಲು ಬರುತ್ತದೆ. ಸುಣ್ಣದ ಗಚ್ಚು ಹಾಕಿದ ಮೇಲೆ ಅದು ಮಣ್ಣಿನ ಗೋಡೆಯೆಂದು ಕಂಡು ಹಿಡಿಯುವದು ಸಾಧ್ಯವೇ ಇಲ್ಲ.

ಈ ಗೋಡೆಗಳು ಯಾವುದೇ ಬಗೆಯ ಚಪ್ಪರವನ್ನು, ಭಾರವಾದ ಮಣ್ಣಿನ ಮಾಡವನ್ನು ಕೂಡ ಹೊರಬಲ್ಲವು. ಅದು ಬೇರೆಯೆ ಕುತೂಹಲಪ್ರದ ವಿಷಯ.

ಈ ಬಗೆಯ ಮಣ್ಣು ಗೋಡೆಯ ಪದ್ಧತಿಯಲ್ಲಿರುವ ದೋಷವೊಂದೆ. ಅದಕ್ಕೆ ಬೇಕಾದುದು ಬರಿ ಶ್ರಮದ ಹೊರತು ಬೇರಾವ ವಸ್ತುವೂ ಅಲ್ಲ. ಹಿಂದುಸ್ತಾನದ ಪಾಲಿಗೆ ಈ ಬಾಧಕವೇ ಸಾಧಕವೆನ್ನಬೇಕು. ಗೋಡೆಗಳ ಮಟ್ಟಿಗೆ ಮನೆಗಾಗಿ ಕೊಳ್ಳಬೇಕಾದ ಸಾಮಗ್ರಿ ಯಾವುದೂ ಇಲ್ಲ.

ಹಳ್ಳಿಯ ಪಂಚಾಯತಿಯವರಲ್ಲಿ ಒಂದಿಷ್ಟು ಹಲಗೆಯ ಅಚ್ಚುಗಳೂ ಹೊಡೆಮಣೆಗಳೂ ಇದ್ದುಬಿಟ್ಟರೆ, ಅವುಗಳನ್ನು ಹಳ್ಳಿಗರಿಗೆ ಒಬ್ಬರ ನಂತರ ಒಬ್ಬರಿಗೆ ಎರವು ಕೊಟ್ಟು ಕಾಲಾಂತರದಲ್ಲಿ ಅತಿ ಕಡಿಮೆ ವೆಚ್ಚದಿಂದ ತೊಂದರೆಯಿಲ್ಲದೆ ಇಡಿ ಹಳ್ಳಿಯನ್ನೆ ಪುನರ್ನಿರ್ಮಿಸಬಹುದು. ಬೇರೆ ಬೇರೆ ಪ್ರಾಂತಿಕ ಸರಕಾರಗಳು, ಒಂದು ನಿರ್ದಿಷ್ಟವಾದ ಯೋಜನೆಗೆ ಬದ್ಧವಾಗಿ ಸಾಮಾಜಿಕ, ಆರ್ಥಿಕ ಮತ್ತು ಆರೋಗ್ಯ ನಿಯಮಕ್ಕೆ ಅನುಗುಣವಾದ ಮನೆ ಕಟ್ಟಲು ಒಪ್ಪುವ ಹಳ್ಳಿಗಳಿಗೆ ಈ ಸಾಧನಗಳನ್ನು ಒದಗಿಸಬಲ್ಲವು. ಬೇಕಾದ ಸಾಧನಗಳಿಗಾಗಿ ಪ್ರತಿ ಹಳ್ಳಿಗೆ ೩೦೦ ರೂಪಾಯಿಯಷ್ಟು ವೆಚ್ಚ ಮಾಡಿದರೆ ಸಾಲಬಹುದು.

ಈ ಕಟ್ಟಡ ಪದ್ಧತಿಯಿಂದ ಬೇಕುಬೇಕಾದ ಆಕೃತಿಯಲ್ಲಿ ಮನೆಗಳನ್ನು ಕಟ್ಟಬಹುದು. ಏಕೆಂದರೆ ಅವೇ ಅಚ್ಚುಗಳೂ ಸಾಧನಗಳೂ ಯಾವ ಆಕಾರದ ಅಥವಾ ಪರಿಮಾಣದ ಮನೆಯ ಕಟ್ಟಲು ಉಪಯೋಗಕ್ಕೆ ಬೀಳುತ್ತವೆ.

—೧೪ನೇ ಪುಟಕ್ಕೆ

## ಪ್ರಶ್ನ—ಪೆಟ್ಟಿಗೆ

### ಸೇವೆ ಪೂಜೆಯಲ್ಲವೆ?

ಪ್ರಶ್ನೆ— ಪರಮಾತ್ಮನ ಪೂಜೆಯಲ್ಲಿ ಕಳೆವ ವೇಳೆಯನ್ನು ಮನುಷ್ಯನು ಬಡವರ ಸೇವೆಯಲ್ಲಿ ಕಳೆಯುವುದು ಹೆಚ್ಚು ಒಳ್ಳೆಯದಲ್ಲವೆ? ನಿಜವಾದ ಸೇವೆ ಮಾಡುವ ಮನುಷ್ಯನಿಗೆ ಭಕ್ತಿಪೂರ್ವಕ ಪೂಜೆ ಅನವಶ್ಯಕವಲ್ಲವೆ?

ಉತ್ತರ— ಈ ಪ್ರಶ್ನೆಗೆ ಯಾವ ಬಗೆಯ ಉತ್ತರ ಕೊಡಬೇಕೆಂಬುದು ನನಗೆ ತಿಳಿಯದಾಗಿದೆ. ಅತ್ಯುಚ್ಚ ಕರ್ಮಯೋಗಿಗಳು ಕೂಡ ಭಕ್ತಿಗೀತಗಳನ್ನು ಮತ್ತು ಸೇವೆಯನ್ನು ಎಂದೂ ಬಿಡುವದಿಲ್ಲ. ಎರಡನೆಯವರ ನಿಜ ಸೇವೆ ಮಾಡುವದೆ ಪೂಜೆಯೆಂದು ಧ್ಯೇಯವಾದಿ ಹೇಳಬಹುದು, ಮತ್ತು ಇಂಥ ಭಕ್ತರು ಭಜನಿ ಮುಂತಾದವುಗಳಲ್ಲಿ ವೇಳೆ ಕಳೆಯುವ ಅವಶ್ಯಕತೆಯೂ ಇಲ್ಲೆಂದು ಹೇಳಬಹುದು ವಸ್ತುತಃ ಭಜನಿ ಮುಂತಾದವುಗಳು ನಿಜವಾದ ಸೇವೆಗೆ ಸಹಾಯಕವಾದವುಗಳು ಮತ್ತು ಭಕ್ತರ ಅಂತರಾತ್ಮದಲ್ಲಿ ಪರಮಾತ್ಮನ ಸ್ಮೃತಿ ಸದಾ ನವ್ಯವಾಗಿಯೆ ಉಳಿಯುವಂತೆ ಮಾಡಲು ಸಾಧನ.

### ಅಸ್ಪೃಶ್ಯತೆಯನ್ನು ಹೋಗಲಾಡಿಸುವದೆಂತು?

ಪ್ರಶ್ನೆ— ಮಂದಿರ ಪ್ರವೇಶದ ಮೇಲಿನ ನಿರ್ಬಂಧ ತೆಗೆದು ಹಾಕುವದು ಸಾರ್ವಜನಿಕ ಬಾವಿಗಳಲ್ಲಿ ಹರಿಜನರಿಗೆ ಪ್ರವೇಶ ದೊರಕಿಸಿಕೊಡುವದು ಅವರ ಶಿಕ್ಷಣಕ್ಕಾಗಿ ಶಿಷ್ಯವೇತನ ಮುಂತಾದವುಗಳನ್ನು ಕೊಡುವದು ಮುಂತಾದ್ದೆಲ್ಲ ಅಷ್ಟರಮಟ್ಟಿಗೆ ಉಪಯುಕ್ತವಿವೆ; ಆದರೆ ಅಸ್ಪೃಶ್ಯತೆಯನ್ನು ನಿರ್ಮೂಲ ಮಾಡಬೇಕಾದರೆ ಹರಿಜನಕೇರಿಗಳನ್ನು ಮತ್ತು ಅವರ ಪ್ರತ್ಯೇಕ ವಸತಿಗಳನ್ನು ರದ್ದುಪಡಿಸುವುದು ನಿಜವಾದ ಮಾರ್ಗವೆಂದು ಮದ್ರಾಸದ ಹರಿಜನ ಬಂಧುವೊಬ್ಬರು ಬರೆಯುತ್ತಾರೆ.

ಉತ್ತರ:— ಮನಸು ಬಂದಲ್ಲೆಲ್ಲ ಹರಿಜನರಿಗೆ ಇರಲು ಅವಕಾಶ ಕೊಟ್ಟರೆ ಅಸ್ಪೃಶ್ಯತೆ ಸಮೂಲ ನಾಶವಾಗುವುದೆಂದು ಹೇಳುವುದು ಸುಲಭವೆನಿಸುತ್ತದೆ. ಹರಿಜನರು ಇಂಥಲ್ಲಿಯೇ ಇರಬೇಕೆಂದು ವಿಧಿಸುವ ಸಾಮಾನ್ಯ ಕಾಯದೆ ಯಾವದೂ ಇರುವದಿಲ್ಲೆಂದು ನನಗೆ ಗೊತ್ತಿದ್ದ ಮಟ್ಟಿಗೆ ಹೇಳಬಹುದಾಗಿದೆ. ಅವರನ್ನು ಹಾಗೆ ಒತ್ತಾಯಗೊಳಿಸುತ್ತಿರುವದು ದುಷ್ಟ ರೂಢಿಯು. ಆ ರೂಢಿ ಇದೀಗ ಅಳಿಯುತಿದೆ ಆದರೆ ಬಹಳ ಸಾವಕಾಶವಾಗಿ. ಅದನ್ನು ತೊಡೆದು ಹಾಕುವದು ಪ್ರತಿಯೊಬ್ಬರ ಕರ್ತವ್ಯ. ಜನರ ಹೃದಯಪರಿವರ್ತನ ಮಾಡುವ ಪ್ರಶ್ನೆಯಿದು. ಆತ್ಯಂತಿಕ ಸ್ವಾರ್ಥತ್ಯಾಗದಿಂದ ಇಷ್ಟ ಪರಿಣಾಮ ಪ್ರಾಪ್ತವಾಗುತ್ತದೆ. ತುಳಸೀದಾಸರು ಹೀಗೆ ಹೇಳಿಲ್ಲವೆ,

“ ಯಜ್ಞದಿಂದಲೆ ಬ್ರಹ್ಮ ಸೃಷ್ಟಿಸಿದ
ಯಜ್ಞದಿಂದಲೆ ವಿಷ್ಣು ಪಾಲಿಸುವ
ಯಜ್ಞದಿಂದಲೆ ಪೃಥ್ವಿ ಬಾಳುತಿದೆ

ಆದುದರಿಂದ ಭವಾನಿಯೆ ಯಜ್ಞವನ್ನು ಮಾಡು”

ಅಂಥ ಆತ್ಯಂತಿಕ ತ್ಯಾಗಿಯ ಅವತಾರವಾದಾಗ ಆ ಕಲಂಕ ಮಾಯವಾಗುವದು ಮತ್ತು ಧರ್ಮವು ಪರಿಶುದ್ಧವಾಗಿ ರಕ್ಷಿತವಾಗುವದು.

### ಮಂತ್ರದ ಅಪರ ಶಬ್ದವೆ ರಾಮನಾಮವೊ?

ಪ್ರಶ್ನೆ :— ನನ್ನ ಅಣ್ಣನ ಮಗನಿಗೆ ಕಾಯಿಲೆಯಾಗಿತ್ತು. ಅವನ ಅಪ್ಪರು ಔಷಧ ಕೊಡಿಸಲಿಲ್ಲ, ಅದರ ಬದಲು ಯಂತ್ರ ಮಂತ್ರಗಳಿಂದ ಗುಣಪಡಿಸಲೆಳಸಿದರು. ಇದರಿಂದ ಏನಾದರೂ ಒಳಿತಾಯಿತೆಂದು ಹೇಳಲು ಬರುವದಿಲ್ಲ. ನಿಮ್ಮ ತಾಯಿಯೂ ಇದೇ ಬಗೆಯ ಮಂತ್ರ ಯಂತ್ರಗಳಿಗೆಳಸಿರಬಹುದು. ನೀವೀಗ ರಾಮನಾಮದ ಬಗ್ಗೆ ಹೇಳುವಿರಿ. ಅದೂ ಮಂತ್ರ ಯಂತ್ರದಂತೆಯೆ ಅಲ್ಲವೆ?

ಉತ್ತರ— ಒಂದಿಲ್ಲೊಂದು ಬಗೆಯಾಗಿ ನಾನು ಈ ಮೊದಲು ಈ ಪ್ರಶ್ನೆಗೆ ಉತ್ತರ ಕೊಟ್ಟಿದ್ದೇನೆ. ಆದರೂ ಮತ್ತೊಮ್ಮೆ ಉತ್ತರ ಕೊಡುವದವಶ್ಯವೆನಿಸುತ್ತದೆ. ನನಗೆ ಗೊತ್ತಿದ್ದ ಮಟ್ಟಿಗೆ ನನ್ನ ತಾಯಿ ನನಗೆ ಔಷಧೋಪಚಾರವನ್ನೆ ಮಾಡಿದ್ದು ನನ್ನ ನೆನಪಿನಲ್ಲಿದೆ. ಆದರೆ ಅವಳಿಗೆ ಮಂತ್ರ ಯಂತ್ರಗಳಲ್ಲಿ ವಿಶ್ವಾಸವಿದ್ದಿತು. ವಿದ್ವಾನ್ ಗೆಳೆಯರಿಗೂ ಅವುಗಳಲ್ಲಿ ವಿಶ್ವಾಸ. ನನಗೆ ಇಂಥ ವಿಶ್ವಾಸವಿಲ್ಲ. ಇಂಥವುಗಳಲ್ಲಿ ವಿಶ್ವಾಸವಿಲ್ಲದ್ದರಿಂದ ನನ್ನ ರಾಮನಾಮಕ್ಕೂ ‘ಜಂತರ ಮಂತ್ರ’ಕ್ಕೂ ಏನೂ ಸಂಬಂಧವಿಲ್ಲ. ಮನಸಿನಿಂದ ರಾಮನಾಮೋಚ್ಚಾರ ಮಾಡುವದೆಂದರೆ ಅನುಪಮ ಶಕ್ತಿಯಿಂದ ಸಹಾಯವನ್ನು ಅಪೇಕ್ಷಿಸಿದಂತೆ. ಅಣು ಬಾಂಬು ಶಕ್ತಿ ಅದರ ಮುಂದೆ ಕ್ಷುಪದಾರ್ಥ. ಎಲ್ಲ ಬಗೆಯ ವೇದನೆಯನ್ನೂ ಆ ಶಕ್ತಿ ಹೋಗಲಾಡಿಸಬಲ್ಲದು ರಾಮನಾಮ ಹೃದಯಾಂತರಾಳದಿಂದ ಹೊರಡಬೇಕೆಂದು ಬಾಯಿಂದ ಹೇಳುವದು ಸುಲಭ. ಆದರೆ ಅದನ್ನು ಸಾಧಿಸುವದು ಬಹಳ ಕಠಿನ. ಆದರೂ ಮಾನವನು ಸಂಪಾದಿಸತಕ್ಕ ಅತಿ ಶ್ರೇಷ್ಠ ಸೊತ್ತದು.

ಹೊಸದಿಲ್ಲಿ ಮೋ. ಕ. ಗಾಂಧಿ

೫—೧೦—೪೬

( ಹಿಂದುಸ್ತಾನಿಯಿಂದ )

# ಸಾರ್ವಜನಿಕ ಪ್ರಕಟನೆ

## ಗಜೇಂದ್ರಗಡ ಸೀದಾ ಕ್ಷೇತ್ರದೊಳಗೆ ಅಕ್ಕಿ, ಗೋದಿ, ಜೋಳ, ಶೆಜ್ಜಿ, ಗೋವಿನಜೋಳ ಹಾಗೂ ಸಕ್ಕರೆ ಇವುಗಳ ಸೀದಾ ಜಾರಿಯಲ್ಲಿ ತರುವಿಕೆ

ನಾಗರಿಕ ಪೂರೈಕೆ ಖಾತೆ
ಮುಂಬಯಿ ಕೋಟೆ, ೧೨ ಸಪ್ಟೆಂಬರ ೧೯೪೬

### ಮುಂಬಯಿ ಸೀದಾ ಆಜ್ಞೆ ೧೯೪೩

ನಂ ೧೬೯ (೧೬) । ಡಿ. ಆರ್— ಮುಂಬಯಿ ಸೀದಾ ಆಜ್ಞೆ ೧೯೪೩ ರ ೨ ನೇ ಕಲಮಿನ (೭) ನೇ ಉಪಕಲಮಿನಿಂದ ದೊರೆತ ಅಧಿಕಾರಗಳನ್ನು ನಡಿಸಿ, ಇದಕ್ಕೆ ಜೋಡಿಸಿದ ಪರಿಶಿಷ್ಟದಲ್ಲಿ ನಿರ್ದಿಷ್ಟಪಡಿಸಿದ ಕ್ಷೇತ್ರದ ಸಂಬಂಧಿ ಕೆಳಗಿನ ಪದಾರ್ಥಗಳನ್ನು ಸೀದಾ ಪದಾರ್ಥಗಳೆಂದು ಮುಂಬಯಿ ಸರಕಾರದವರು ಗೊತ್ತುಪಡಿಸುತ್ತಾರೆ. ಆ ಪದಾರ್ಥಗಳು ಯಾವವೆಂದರೆ—

ಅಕ್ಕಿ, ಸಿಪ್ಪೆ ಸಹಿತ ಅಕ್ಕಿ ಮತ್ತೂ ಅಕ್ಕಿಹಿಟ್ಟು
ಗೋದಿ, ಕಣಕ, ಸಜ್ಜಿಗೆ, ರವೆ, ಮೈದಾ, ಮತ್ತು ಆಟಾ ಸಹಿತ
ಜೋಳ ಹಾಗೂ ಜೋಳದ ಹಿಟ್ಟು
ಶೆಜ್ಜಿ ಹಾಗೂ ಶೆಜ್ಜಿಹಿಟ್ಟು
ಗೋವಿನಜೋಳ, ಗೋವಿನಜೋಳದ ಹಿಟ್ಟು, ಸಜ್ಜಿಗೆ, ರವಾ, ಮೈದಾ ಮತ್ತು ಆಟಾ ಸಹಿತ, ಆದರೆ ಗೋವಿನಜೋಳದ ಹಸರು ತೆನೆಗಳನ್ನು ಬಿಟ್ಟು.
ಕಲ್ಲುಸಕ್ಕರೆ, ಹರಳುಸಕ್ಕರೆ, ಪುಡಿಸಕ್ಕರೆ, ಬೋರಾ ಸಕ್ಕರೆ ಮತ್ತು ಲೇಸಾ ಸಕ್ಕರೆ.

### ಪರಿಶಿಷ್ಟ
### ಕ್ಷೇತ್ರಗಳು

೧. (ಅ) ಉಣಚಗೇರಿ ಗಾವಠಾಣದ ಮತ್ತು ಮಜರೆ ಗಜೇಂದ್ರಗಡ ಗಾವಠಾಣದ ಸೀಮೆಗಳನ್ನೊಳಗೊಂಡ ಕ್ಷೇತ್ರ.

(ಬ) ಉಣಚಗೇರಿಯ ರೆವಿನ್ಯೂ ಸರ್ವೆ ನಂ. ೧, ೨, ೯೪, ೯೫, ೯೬, ೨೩೦, ೨೩೨, ೩೧೪, ೩೧೫; ೨೦, ೨೧, ೨೨, ೩೫, ೩೬, ೩೭, ೩೮, ೩೯, ೪೦, ೪೧, ೪೨, ೬೧, ೬೨, ೬೩, ೬೪, ೬೫, ೬೬, ೬೭, ೬೮, ೨೮೫, ೨೮೬, ೨೮೭, ೨೯೪, ೨೯೫, ೨೯೬, ೨೭೨, ೨೭೩, ೨೯೦, ೨೯೧, ೨೮೯, ೨೯೨, ೨೯೩, ೨೯೯, ೩೦೦, ೨೯೭, ೨೯೮, ೨೪೦, ೩೦೧, ೩೦೨, ೩೦೩, ೩೦೪, ೩೦೫, ೩೦೬, ೩೦೭, ೩೦೮, ೩೦೯, ೩೧೦, ೩೧೧, ೩೧೨, ೩೧೩ ಇವುಗಳನ್ನು ಒಳಗೊಂಡಿರುವ ಕ್ಷೇತ್ರ.

(ಕ) ಗಜೇಂದ್ರಗಡ — ಉಣಚಗೇರಿ ರಸ್ತೆಯನ್ನೊಳಗೊಂಡ ಕ್ಷೇತ್ರ

(ಡ) ಉಣಚಗೇರಿಯ ಸರ್ವೆ ನಂ. ೨೭೨ ರ ನೈಋತ್ಯದ ತುದಿಗೆ ಇರುವ “ಸರಕಾರಿ ಹಳ್ಳ” ಎಂದು ಕರೆಯಲ್ಪಡುವ ಹಳ್ಳದ ವರೆಗಿನ ಗಜೇಂದ್ರಗಡ—ಗದಗ ರಸ್ತೆಯನ್ನು ಒಳಗೊಂಡ ಕ್ಷೇತ್ರ.

### ಮುಂಬಯಿ ಸೀದಾ ಆಜ್ಞೆ, ೧೯೪೩

ನಂ. ೧೬೯ (೧೬) (ಅ) ಡಿ. ಆರ್— ಮುಂಬಯಿ ಸೀದಾ ಆಜ್ಞೆ ೧೯೪೩ ರ ೧೨ ನೇ ಕಲಮನ್ನನುಸರಿಸಿ, ಕೆಳಗೆ ಕೊಟ್ಟ ಕ್ಷೇತ್ರಗಳ ಸಂಬಂಧಿ ಕೆಳಗಿನ ನಿಯಂತ್ರಣಾಜ್ಞೆಯನ್ನು ಮುಂಬಯಿ ಸರಕಾರದವರು ವಿಧಿಸುತ್ತಾರೆ—

ಸಂಬಂಧಿಸಿದ ಕ್ಷೇತ್ರಗಳು—

(ಅ) ಉಣಚಗೇರಿ ಗಾವಠಾಣದ ಮತ್ತು ಮಜರೆ ಗಜೇಂದ್ರಗಡ ಗಾವಠಾಣದ ಸೀಮೆಗಳನ್ನೊಳಗೊಂಡ ಕ್ಷೇತ್ರ.

(ಬ) ಉಣಚಗೇರಿಯ ರೆವಿನ್ಯೂ ಸರ್ವೆ ನಂ. ೧, ೨, ೯೪, ೯೫, ೯೬, ೨೩೦, ೨೩೨, ೩೧೪, ೩೧೫, ೨೦, ೨೧, ೨೨, ೩೫, ೩೬, ೩೭, ೩೮, ೩೯, ೪೦, ೪೧, ೪೨, ೬೧, ೬೨, ೬೩, ೬೪, ೬೫, ೬೬, ೬೭, ೬೮, ೨೮೫, ೨೮೬, ೨೮೭, ೨೯೪, ೨೯೫, ೨೯೬, ೨೭೨, ೨೭೩, ೨೯೦, ೨೯೧, ೨೮೯, ೨೯೨, ೨೯೩, ೨೯೯, ೩೦೦, ೨೯೭,

೨೯೮, ೨೪೦, ೩೦೧, ೩೦೨, ೩೦೩, ೩೦೪, ೩೦೫, ೩೦೬, ೩೦೭, ೩೦೮, ೩೦೯, ೩೧೦, ೩೧೧, ೩೧೨ ಇವುಗಳನ್ನೊಳಗೊಂಡ ಕ್ಷೇತ್ರ

(ಕ) ಗಜೇಂದ್ರಗಡ— ಉಣಚಗೇರಿ ರಸ್ತೆಯನ್ನೊಳಗೊಂಡ ಕ್ಷೇತ್ರ, ಮತ್ತು

(ಡ) ಉಣಚಗೇರಿಯ ಸರ್ವೆ ನಂ. ೨೭೨ ರ ನೈಋತ್ಯದ ತುದಿಗೆ ಇರುವ ಸರಕಾರಿ ಹಳ್ಳ ಎಂದು ಕರೆಯಲ್ಪಡುವ ಹಳ್ಳದ ವರೆಗೆ ಗಜೇಂದ್ರಗಡ—ಗದಗ ರಸ್ತೆಯನ್ನೊಳಗೊಂಡ ಕ್ಷೇತ್ರ, (ಸದರ ಕ್ಷೇತ್ರವೆಂದು ಮುಂದೆ ಕರೆಯಲ್ಪಟ್ಟಿರುವ ಕ್ಷೇತ್ರ), ಏನಂದರೆ—

### ಪರಿಚ್ಛೇದ I
### ಸಾಮಾನ್ಯ

೧ ಈ ನಿಯಂತ್ರಣಾಜ್ಞೆಯನ್ನು “ಗಜೇಂದ್ರಗಡ ಸೀದಾ ನಿಯಂತ್ರಣಾಜ್ಞೆ, ೧೯೪೬” ಎಂದು ಕರೆಯತಕ್ಕದ್ದು.

೨ ಈ ನಿಯಂತ್ರಣಾಜ್ಞೆಯಲ್ಲಿ, ವಿಷಯಕ್ಕೆ ಅಥವಾ ಸಂದರ್ಭಕ್ಕೆ ಒಗ್ಗದಂತಾದ್ದು ಏನೂ ಇರದೆ ಇದ್ದಲ್ಲಿ, —

( ೧ ) “ ದೈಹಿಕ ಶ್ರಮಜೀವಿ ” ಎಂದರೆ ಭಾರವಾದ ದೈಹಿಕ ಕೆಲಸದಲ್ಲಿ ತೊಡಗಿದ ೧೨ ವರ್ಷದ ಅಥವಾ ಅದಕ್ಕೂ ಹೆಚ್ಚಿನ ವಯಸ್ಸಿನ ವ್ಯಕ್ತಿಯು;

ಸ್ಪಷ್ಟೀಕರಣ:— ಧಾರವಾಡ ಜಿಲ್ಹೆಯ ಮ್ಯಾಜಿಸ್ಟ್ರೇಟರ ( ಈ ಮುಂದೆ ಜಿಲ್ಹಾ ಮ್ಯಾಜಿಸ್ಟ್ರೇಟರೆಂದು ಕರೆಯಲ್ಪಟ್ಟದೆ. ) ಅಥವಾ ಈ ಸಂಬಂಧವಾಗಿ ಅವರಿಂದ ಅಧಿಕೃತನಾದ ಇತರ ಯಾವನೇ ಅಧಿಕಾರಿಯು ಯಾವದೇ ವ್ಯಕ್ತಿಯು ದೈಹಿಕ ಶ್ರಮಜೀವಿಯು ಹೌದು ಅಥವಾ ಅಲ್ಲ ಎಂಬ ಬಗ್ಗೆ ಕೊಟ್ಟ ನಿರ್ಣಯವೇ ಕೊನೆಯದು.

( ೨ ) ‘ ಸೀದಾ ಅಧಿಕಾರಿ ’ ಎಂದರೆ ಗೊತ್ತುಪಡಿಸಿದಂಥ ಆ ಕ್ಷೇತ್ರದ ಸಂಬಂಧಿ ಪ್ರಾಂತಿಕ ಸರಕಾರದವರಿಂದ ನೇಮಕ ಹೊಂದಿದ ಅಧಿಕಾರಿ ಹಾಗೂ ಡೆಪೂಟಿ ರೇಶನಿಂಗ ಅಫೀಸರ ಅಥವಾ ಅಸಿಸ್ಟಂಟ ರೇಶನಿಂಗ ಅಫೀಸರ, ಸೀದಾ ಅಧಿಕಾರಿಯಿಂದ ಅಧಿಕೃತನಾದ ಚೀಫ ರೇಶನಿಂಗ ಇನಸ್ಪೇಕ್ಟರ ಮತ್ತು ಸೀದಾ ಅಧಿಕಾರಿಯಿಂದ ಈ ಬಗ್ಗೆ ವಿಶಿಷ್ಟವಾಗಿ ಅಧಿಕೃತನಾದ ಇತರ ಯಾವನೇ ಅಧಿಕಾರಿಯನ್ನು ಒಳಗೊಳ್ಳುತ್ತದೆ.

( ೩ ) “ ಸೀದಾ ಅವಧಿ ” ಅಂದರೆ ತಿಂಗಳದ ಕೊನೆಯ ದಿನದ ಮಧ್ಯರಾತ್ರಿಯಿಂದ ಮರು ತಿಂಗಳ ೧೫ನೇ ದಿನದ ಮಧ್ಯರಾತ್ರಿಯ ವರೆಗಿನ ಅವಧಿ ಇಲ್ಲವೆ ತಿಂಗಳದ ೧೫ನೆತಾರೀಖಿನ ಮಧ್ಯರಾತ್ರಿಯಿಂದ ಹಿಡಿದು ತಿಂಗಳ ಕೊನೆಯ ದಿವಸದ ಮಧ್ಯರಾತ್ರಿಗೆ ಮುಗಿಯುವ ವರೆಗಿನ ಅವಧಿ.

೩. ಈ ನಿಯಂತ್ರಣಾಜ್ಞೆಯ ಉದ್ದಿಷ್ಟವಾಗಿ ಅಲ್ಪವಯಿಯಾದ ವ್ಯಕ್ತಿಯಿಂದ ಮಾಡಲ್ಪಡಬೇಕಾದ ಯಾವದೇ ಕೆಲಸವು ಅಲ್ಪವಯಿಯಿಂದ ಮಾಡಲ್ಪಡದೆ ಇದ್ದ ಪಕ್ಷದಲ್ಲಿ, ಅವನ ಪರವಾಗಿ ಆ ಸಮಯದಲ್ಲಿ ಅವನ ಪಾಲಕನಾದ ಅಥವಾ ಆ ಸಮಯದಲ್ಲಿ ಅವನ ಪ್ರತ್ಯಕ್ಷ ಸಂರಕ್ಷಣ ಇಲ್ಲವೆ ಅವನ ಮೇಲೆ ನಿಯಂತ್ರಣಾಧಿಕಾರವಿದ್ದಂಥ ವ್ಯಕ್ತಿಯಿಂದ ಮಾಡಲ್ಪಡತಕ್ಕದ್ದು.

೪. ಅಧಿಕೃತ ಠೋಕ ಅಥವಾ ಕಿರಕೋಳ ಹಂಚಿಕೆಗಾರನು ಅಥವಾ ಅಂಗಡಿಯು, ಹಾಗೆ ಮಾಡಲು ಅವಶ್ಯವಿದ್ದಾಗ್ಗೆ, ೧೯೪೨ ನೇ ಆಹಾರ ಧಾನ್ಯಗಳ ನಿಯಂತ್ರಣಾಜ್ಞೆಯ ಹಾಗೂ ೧೯೪೨ ನೇ ಮುಂಬಯಿ ಕಿರಕೋಳ ವ್ಯಾಪಾರ ನಿಯಂತ್ರಣ ಮತ್ತು ಲೈಸೆನ್ಸಿಂಗ ಆಜ್ಞೆಯ ಪ್ರಕಾರ ಲೈಸೆನ್ಸನ್ನು ಅಥವಾ ಅಧಿಕಾರ ಪತ್ರವನ್ನು ಪಡೆಯತಕ್ಕದ್ದು ಮತ್ತು ಅವುಗಳಲ್ಲಿಯ ನಿರ್ಬಂಧಗಳನ್ನು ಪಾಲಿಸತಕ್ಕದ್ದು.

೪—ಅ. ಸೀದಾ ಕಾಗದದೊಳಗಿನ ಯಾವದೇ ಎಂಟ್ರಿಯನ್ನು ಯಾವನೇ ವ್ಯಕ್ತಿಯು ಕಾಯದೇಶೀರ ಅಧಿಕಾರವಿಲ್ಲದೆ ಬದಲಿಸಕೂಡದು. ಆದರೆ ಸೀದಾ ಕಾಗದದಲ್ಲಿ ಅದರ ವಿಧಿಬದ್ಧತೆಗೆ ಅಥವಾ ಅದರಿಂದ ಪಡೆಯಬಹುದಾದ ಸೀದಾ ಪದಾರ್ಥಗಳ ಪರಿಮಾಣಕ್ಕೆ ಧಕ್ಕೆ ತಗಲುವ ಯಾವದೇ ಅನಧಿಕೃತವಾದ ಬದಲಾವಣೆಯು ಮಾಡಲ್ಪಟ್ಟರೆ, ಅಂಥ ಸೀದಾ ಕಾಗದದ ಧಾರಣದಾರನು, ಅಥವಾ ಆ ಕ್ಷೇತ್ರದಿಂದ ಧಾರಣದಾರನ ಗೈರಹಾಜರಿಯಲ್ಲಿ ಅಂಥ ಧಾರಣದಾರನು ಸದಸ್ಯನಿರುವ ಕುಟುಂಬದ ವ್ಯವಸ್ಥೆಯನ್ನು ನೋಡಿಕೊಳ್ಳುವ ಅಥವಾ ಅಂಥ ಧಾರಣದಾರನ ಅಂಗಡಿಯ ವ್ಯವಸ್ಥೆಯನ್ನು ವಹಿಸಿಕೊಂಡ ವ್ಯಕ್ತಿಯು, ಆಯಾ ಕಾರ್ಯ ಸಂದರ್ಭಕ್ಕನುಗುಣವಾಗಬಹುದಾದಂತೆ, ಆಗಿಂದಾಗ್ಗೆ ಆ ಸಂಗತಿಯನ್ನು ಸೀದಾ ಅಧಿಕಾರಿಗೆ ವರದಿ ಮಾಡತಕ್ಕದ್ದು.

### ಪರಿಚ್ಛೇದ II
### ಕೌಟುಂಬಿಕ ವಿನಿಯೋಗ

೫. ಸೂಚಿಸಿದ ಕ್ಷೇತ್ರದಲ್ಲಿ ಕುಟುಂಬದ ವಿನಿಯೋಗಕ್ಕಾಗಿ, ಕೊಟ್ಟ ಸೀದಾಕಾರ್ಡುಗಳು ಮತ್ತು ಸೀದಾ ತಿಕೀಟುಗಳು ಸೀದಾಕಾಗದಗಳಾಗಿರುತ್ತವೆ.

೬. ( ೧ ) ಸೀದಾಕಾರ್ಡು ಇತರ ಸಂಗತಿಗಳನ್ನೊಳಗೊಂಡು ಕೆಳಗಿನ ವಿವರಗಳನ್ನೂ ಒಳಗೊಳ್ಳುವದು. ಆ ವಿವರಗಳು ಏನೆಂದರೆ—

( I ) ಸೀದಾ ಕಾರ್ಡಿನ ಅನುಕ್ರಮ ನಂಬರ
( II ) ಕುಟುಂಬದ ಯಜಮಾನನ ಹೆಸರು.
( III ) ಕುಟುಂಬದ ಯಜಮಾನನ ವಿಳಾಸ
( IV ) ಕುಟುಂಬದೊಳಗಿನ ಸದಸ್ಯರ ಸಂಖ್ಯೆ.
( V ) ಕುಟುಂಬಕ್ಕೆ ಕೊಟ್ಟ ಸೀದಾ ಪದಾರ್ಥಗಳ ಸಂಬಂಧಿ ಯುನಿಟ್ಟುಗಳು.
( VI ) ಕುಟುಂಬಕ್ಕೆ ನಿಯೋಜಿತವಾದ ಅಧಿಕೃತ ಕಿರಕೋಳ ಹಂಚಿಕೆಗಾರನ ಹೆಸರು ಮತ್ತು ಅಧಿಕಾರಪತ್ರದ ನಂಬರ

(೭) ಮುದ್ದಾಂ ಅಪವಾದ ಹೇಳದೆ ಇದ್ದ ಪಕ್ಷದಲ್ಲಿ, ಸಾಮಾನ್ಯವಾಗಿ ಒಂದು ಸೀದಾ ಕಾರ್ಡಿಗೆ ೨೪ ಕೂಪನ್ನುಗಳು ಇರುತ್ತವೆ. ಪ್ರತಿಯೊಂದು ಕೂಪನ್ನಿನ ಮೇಲೆ ಅದು ಊರ್ಜಿತದಲ್ಲಿರುವ ಸೀದಾ ಅವಧಿಯನ್ನು ಬರಹದಿಂದ ಸೂಚಿಸಿರುತ್ತದೆ: ಆದರೆ ಜಿಲ್ಹಾ ಮಾಜಿಸ್ಟ್ರೇಟರು ಅಧಿಕೃತ ಗ್ಯಾಝೆಟದಲ್ಲಿ ಪ್ರಕಟನೆಯನ್ನು ಕೊಟ್ಟು ಯಾವನೇ ವ್ಯಕ್ತಿಯ ಅಥವಾ ಯಾವದೊಂದು ವರ್ಗದ ಜನರ ಅಥವಾ ಸಾಮಾನ್ಯವಾಗಿ ಸಾರ್ವಜನಿಕರ ಮತ್ತು ಅವುಗಳ ಮೇಲೆ ದೊರೆವ ಸೀದಾ ಪದಾರ್ಥ ಅಥವಾ ಸೀದಾ ಪದಾರ್ಥಗಳ ಸಂಬಂಧಿ ನಿರ್ದಿಷ್ಟವಾದ ಸೀದಾ ಅವಧಿಗಳ ವರೆಗೆ ಜಾರಿಯಲ್ಲಿದ್ದ ಕೂಪನ್ನುಗಳನ್ನು ಇತರ ನಿರ್ದಿಷ್ಟ ಸೀದಾ ಅವಧಿಗಳ ವರೆಗೆ ಸಹ ಊರ್ಜಿತದಲ್ಲಿರುವವುಗಳೆಂದು ನಿರ್ಣಯಿಸಬಹುದು:

ಮತ್ತೂ ಏನಂದರೆ— ಸೀದಾ ತಾರೀಖಿನ ದಿನ ಯಾವನೊಬ್ಬ ಅಂಥ ವ್ಯಕ್ತಿಯಿಂದ ಅಥವಾ ಅಂಥ ವ್ಯಕ್ತಿಯ ಪರವಾಗಿ ಅಥವಾ ಅಂಥ ವ್ಯಕ್ತಿಯ ಅಥವಾ ಅವನ ಕುಟುಂಬದ ಇತರ ಸದಸ್ಯರ ಉಪಯೋಗಕ್ಕಾಗಿ ಅವನ ಅಥವಾ ಅವನ ಕುಟುಂಬದ ಸದಸ್ಯರ ವಶದಲ್ಲಿದ್ದ ಇಲ್ಲವೆ ವಶದಲ್ಲಿದೆಯೆಂದು ನಿರೀಕ್ಷಿಸಿದ ಸೀದಾ ಪದಾರ್ಥಗಳನ್ನು ಲಕ್ಷ್ಯಕ್ಕೆತಂದು ಜಿಲ್ಹಾ ಮ್ಯಾಜಿಸ್ಟ್ರೇಟರು ಈ ಸಂಬಂಧವಾಗಿ ಅಧಿಕೃತ ಗ್ಯಾಝೆಟದಲ್ಲಿ ಪ್ರಸಿದ್ಧಿಸಿ ಗೊತ್ತುಪಡಿಸಬಹುದಾದ ಪ್ರಮಾಣದ ಪ್ರಕಾರ ಅಂಥ ಸೀದಾ ಕಾರ್ಡುಗಳ ಮೇಲಿನ ಸರಿಯಾದ ಕೂಪನ್ನುಗಳನ್ನು ಅಥವಾ ಅವುಗಳ ಭಾಗಗಳನ್ನು ರದ್ದುಗೊಳಿಸತಕ್ಕದ್ದು ಅಥವಾ ರದ್ದು ಮಾಡಿಸತಕ್ಕದ್ದು.

ಮತ್ತೂ ನಿರ್ದಿಷ್ಟ ಸೀದಾ ಅವಧಿಗಳ ಬಗ್ಗೆ ರದ್ದುಗೊಳಿಸಲ್ಪಟ್ಟ ಕೂಪನ್ನುಗಳನ್ನು ಯಾವನೊಬ್ಬ ವ್ಯಕ್ತಿಯು, ಅಥವಾ ಯಾವದೊಂದು ವರ್ಗದ ಜನರ ಅಥವಾ ಸಾಮಾನ್ಯವಾಗಿ ಸಾರ್ವಜನಿಕರ ಸಂಬಂಧಿ ಹಾಗೂ ಆ ಕೂಪನ್ನುಗಳ ಮೇಲಿಂದ ದೊರೆವ ಯಾವದೇ ಸೀದಾ ಪದಾರ್ಥದ ಅಥವಾ ಎಲ್ಲ ಸೀದಾ ಪದಾರ್ಥಗಳ ಸಂಬಂಧಿ ಬೇರೆ ನಿರ್ದಿಷ್ಟ ಸೀದಾ ಅವಧಿಗಳಲ್ಲಿ ಸಹ ಊರ್ಜಿತದಲ್ಲಿರುವವುಗಳೆಂದು ಪ್ರಾಂತಿಕ ಸರಕಾರದವರು ಅಧಿಕೃತ ಗ್ಯಾಝೆಟದಲ್ಲಿ ಪ್ರಕಟನೆಯನ್ನು ಹೊರಡಿಸಿ ಜಾಹೀರ ಪಡಿಸಬಹುದು.

೭ ಸದರ ಕ್ಷೇತ್ರದಲ್ಲಿ ವಾಸಿಸುವ ಅಥವಾ ವಾಸಿಸಲಿಚ್ಛಿಸುವ ಯಾವದೇ ವ್ಯಕ್ತಿಯು ಮತ್ತು ಯಾವನಿಗೆ ಸೀದಾ ಕಾರ್ಡು ಕೊಡಲಾಗಿಲ್ಲವೋ ಅಥವಾ ಸೀದಾ ಕಾರ್ಡು ಕೊಟ್ಟ ಯಾವದೇ ಕುಟುಂಬದಲ್ಲಿ ಯಾವನ ಸಮಾವೇಶವಾಗಿಲ್ಲವೊ, ಮತ್ತು ಯಾವನು ತನ್ನ ಸ್ವಂತಕ್ಕೆ ಅಥವಾ ತನ್ನ ಕುಟುಂಬದ ಪರವಾಗಿ ಸೀದಾ ಕಾರ್ಡ ಪಡೆಯಲು ಇಚ್ಛಿಸುವನೋ ಅಂಥವನು ಸೀದಾ ಅಧಿಕಾರಿಯು ಗೊತ್ತುಪಡಿಸಬಹುದಾದಂಥ ನಮೂನೆಯಲ್ಲಿ ಸತ್ಯವಾದ ಮತ್ತು ಸರಿಯಾದ ಮಾಹಿತಿಯನ್ನು ತುಂಬಿ ಸೀದಾ ಅಧಿಕಾರಿಯ ಕಡೆಗೆ ಅರ್ಜಿ ಮಾಡತಕ್ಕದ್ದು. ಅರ್ಜಿದಾರನು ಒದಗಿಸಿದ ಮಾಹಿತಿಯು ಸರಿಯಾಗಿದೆಯೊ ಇಲ್ಲವೊ ಎಂಬ ಬಗ್ಗೆ ತನಗೆ ಯೋಗ್ಯ ಕಂಡಂತೆ ಸೀದಾ ಅಧಿಕಾರಿಯು ವಿಚಾರಣೆಯನ್ನು ಕೈಕೊಳ್ಳಬಹುದು ಅಥವಾ ಮಾಡಿಸಬಹುದು.

೮. ಯಾವದೇ ವ್ಯಕ್ತಿಯು ತನ್ನ ಸ್ವಂತದ ಬಗ್ಗೆ ಅಥವಾ ತನ್ನ ಕುಟುಂಬದೊಳಗಿನ ಎರಡನೇ ವ್ಯಕ್ತಿಯ ದೆಸೆಯಿಂದ, ತಾನು ಅಥವಾ ಅಂಥ ವ್ಯಕ್ತಿಯು ಮೊದಲೇ ಸೀದಾ ಕಾರ್ಡನ್ನು ಪಡೆದಿದ್ದರೆ ಅಥವಾ ಸೀದಾ ಕಾರ್ಡು ಕೊಡಲ್ಪಟ್ಟ ಕುಟುಂಬದಲ್ಲಿ ಸಮಾವೇಶವಾಗಿದ್ದರೆ ಸೀದಾ ಕಾರ್ಡಿನ ಬಗ್ಗೆ ಅರ್ಜಿಯನ್ನು ಮಾಡಕೂಡದು.

೯ ಯಾವನೇ ವ್ಯಕ್ತಿಯು ಖೊಟ್ಟಿ ಮಾಹಿತಿಯನ್ನು ಪೂರೈಸಿ ಸೀದಾ ಕಾರ್ಡನ್ನು ಪಡೆಯತಕ್ಕದಲ್ಲ ಮತ್ತು ಪಡೆಯಲು ಯತ್ನಿಸತಕ್ಕದ್ದಲ್ಲ.

೧೦ ಮುದ್ದಾಂ ಅಪವಾದ ಹೇಳದೆ ಇದ್ದ ಸಂದರ್ಭದಲ್ಲಿ ಬಿಟ್ಟು ಯಾವನೂ ತನ್ನ ಹೆಸರಿನಲ್ಲಿ ಅಥವಾ ತಾನು ಸಮಾವೇಶವಾದ ಕುಟುಂಬದ ಸಲುವಾಗಿ ಕೊಡಲ್ಪಟ್ಟ ಒಂದಕ್ಕಿಂತ ಹೆಚ್ಚು ಕಾರ್ಡುಗಳ ಮೇಲೆ ಸೀದಾ ಪದಾರ್ಥಗಳನ್ನು ಪಡೆಯಬಾರದು ಅಥವಾ ಪಡೆಯಲು ಯತ್ನಿಸಕೂಡದು. ಯಾವನೊಬ್ಬ ವ್ಯಕ್ತಿಯ ಹೆಸರಿನಲ್ಲಿ ಏಕಕಾಲಕ್ಕೆ ಉಪಯೋಗಿಸಲು ಒಂದಕ್ಕಿಂತ ಅಧಿಕ ಸೀದಾ ಕಾರ್ಡುಗಳು ಕೊಡಲ್ಪಟ್ಟಿದ್ದರೆ ಇಲ್ಲವೆ ಸೀದಾ ಕಾರ್ಡು ಕೊಡಲ್ಪಟ್ಟಂಥ ಒಂದಕ್ಕಿಂತ ಹೆಚ್ಚು ಕುಟುಂಬಗಳಲ್ಲಿ ಯಾವನೊಬ್ಬ ವ್ಯಕ್ತಿಯು ಸಮಾವೇಶವಾಗಿದ್ದರೆ, ಅಂಥ ವ್ಯಕ್ತಿಯು ಸೀದಾ ಅಧಿಕಾರಿಗೆ ಕೂಡಲೇ ಆ ಸಂಗತಿಯನ್ನು ಅರುಹತಕ್ಕದ್ದು.

೧೧ (೧) ಯಾವನೊಬ್ಬನು ಸದರ ಕ್ಷೇತ್ರದಲ್ಲಿ ೩ ದಿವಸಗಳಿಗಿಂತ ಹೆಚ್ಚು ಕಾಲ ಆದರೆ ೬ ಸೀದಾ ಅವಧಿಗಳಿಗಿಂತ ಕಡಿಮೆ ಕಾಲ ವಾಸಿಸುವ ಸಂಭವವಿದ್ದರೆ, ಅಂಥವನು ಸೀದಾ ಅಧಿಕಾರಿಯು ಗೊತ್ತು ಮಾಡಿದ ನಮೂನೆಯಲ್ಲಿ ಸೀದಾ ಅಧಿಕಾರಿಯ ಕಡೆಗೆ ಸೀದಾ ತಾರೀಖಿನ ನಂತರ ಅರ್ಜಿ ಮಾಡಿದರೆ ಸೀದಾ ತಿಕೀಟು ದೊರೆಯುವದು. ಸೀದಾ ತಿಕೀಟು ಅರ್ಜಿದಾರನಿಗೆ ಕೊಡಲ್ಪಡಬೇಕಾದ ಆಹಾರ ಧಾನ್ಯಗಳ, ಸಕ್ಕರೆಯ ಮತ್ತು ಚಿಮಣಿಯೆಣ್ಣೆಯ ಪರಮಾವಧಿ ಪರಿಮಾಣಗಳನ್ನು ಮತ್ತು ಅವುಗಳನ್ನು ಪಡೆಯತಕ್ಕ ಅಧಿಕೃತ ಕಿರಕೋಳ ವ್ಯಾಪಾರಸ್ಥನನ್ನು ನಿರ್ದಿಷ್ಟಗೊಳಿಸುವದು.

(೨) ಸೀದಾ ಅಧಿಕಾರಿಯು ಸೀದಾ ತಿಕೀಟಿನ ಮೇಲೆ ಕೆಳಗೆ ಕೊಟ್ಟ ಪ್ರಕಾರ ಆಹಾರ ಧಾನ್ಯಗಳನ್ನು ಮತ್ತು ಸಕ್ಕರೆಯನ್ನು ಕೊಡತಕ್ಕದ್ದು.

(1) ಮೂರು ದಿನಕ್ಕಿಂತ ಹೆಚ್ಚು ಆದರೆ ಏಳು ದಿನಗಳಿಗಿಂತ ಕಡಿಮೆ ಅವಧಿಯ ವಾಸದ ಬಗ್ಗೆ ಪೂರ್ಣ ಅವಧಿಯದು.

(ಅ) ಆರು ವರ್ಷ ಅಥವಾ ಅದಕ್ಕೂ ಅಧಿಕ ವಯಸ್ಸಿನ ವ್ಯಕ್ತಿಗೆ ಆಹಾರ ಧಾನ್ಯ ಮತ್ತು ಸಕ್ಕರೆ ಪ್ರತಿಯೊಂದರ ೧/೨ ಯುನಿಟ್ಟು; ಮತ್ತು

(ಬ) ಆರುವರ್ಷಕಿಂತ ಕಡಿಮೆ ವಯಸ್ಸಿನ ಮಗುವಿಗೆ ಆಹಾರ ಧಾನ್ಯ ಮತ್ತು ಸಕ್ಕರೆ ಪ್ರತಿಯೊಂದರ ೧/೪ ಯುನಿಟ್ಟು ಮತ್ತು ಇವುಗಳ ಹೊರ್ತಾಗಿ ಹೆಚ್ಚಿಗೆ ಸಕ್ಕರೆ ಸೀದಾದ ಬಗ್ಗೆ ಅರ್ಜಿ ಮಾಡಿದರೆ ೧/೪ ಯುನಿಟ್ಟು ಸಕ್ಕರೆ ಹೆಚ್ಚಿಗೆ

(2) ಆರು ದಿನಗಳಿಗಿಂತ ಅಧಿಕ ಆದರೆ ೨೮ ದಿನಗಳಿಗಿಂತ ಕಡಿಮೆ ಅವಧಿಯ ಬಗ್ಗೆ—

A ಏಳು ದಿನಗಳ ಪ್ರತಿಯೊಂದು ಅವಧಿಗೆ:

(ಅ) ಆರು ವರ್ಷದ ಅಥವಾ ಅದಕ್ಕೂ ಅಧಿಕ ವಯಸ್ಸಿನ ವ್ಯಕ್ತಿಗೆ ಆಹಾರ ಧಾನ್ಯ ಮತ್ತು ಸಕ್ಕರೆ ಪ್ರತಿಯೊಂದರ ಒಂದು ಯುನಿಟ್ಟು

(ಬ) ಆರಕ್ಕಿಂತ ಕಡಿಮೆ ವಯಸ್ಸಿನ ಕೂಸಿಗೆ ಆಹಾರ ಧಾನ್ಯ ಮತ್ತು ಸಕ್ಕರೆ ಪ್ರತಿಯೊಂದರ ೧/೨ ಯುನಿಟ್ಟು ಮತ್ತು ಇದಲ್ಲದೆ ಅಧಿಕ ಸಕ್ಕರೆಯ ಸೀದಾ ಬಗ್ಗೆ ಅರ್ಜಿ ಮಾಡಿದಲ್ಲಿ ೧/೨ ಯುನಿಟ್ಟು ಸಕ್ಕರೆ.

B ೭ ದಿನಗಳಿಗಿಂತ ಕಡಿಮೆ ಆದರೆ ೩ ದಿವಸಗಳಿಗಿಂತ ಹೆಚ್ಚು ಅವಧಿಯ ಬಗ್ಗೆ ಈ ಉಪಕಲಮಿನ (1)ರಲ್ಲಿ ಕೊಟ್ಟಂತೆ

(೨ ಅ) ಅರ್ಜಿಯ ತಾರೀಖಿನಿಂದ ಹಿಂದಿನ ನಾಲ್ಕು ದಿನಗಳ ಅವಧಿಯ ಹೊರ್ತಾಗಿ ಹಿಂದಿನ ಯಾವದೇ ಅವಧಿಯ ಬಗ್ಗೆ ಆಹಾರ ಧಾನ್ಯಗಳ ಅಥವಾ ಸಕ್ಕರೆಯ ಯಾವದೇ ಸೀದಾ ಹಂಚಿಕೆಯನ್ನು (೨)ನೇ ಉಪಕಲಮಿನಲ್ಲಿಯದಾವುದೂ ಅಧಿಕೃತಗೊಳಿಸದು.

(೩) ಅರ್ಜಿದಾರನು ಸದರ ಕ್ಷೇತ್ರದಲ್ಲಿ ೨೮ ದಿನಗಳಿಗಿಂತ ಹೆಚ್ಚಿಗೆ ವಾಸಿಸುವನೆಂದು ಸೀದಾ ಅಧಿಕಾರಿಗೆ ಖಾತ್ರಿಯಾದಲ್ಲಿ (೨)ನೇ ಉಪಕಲಮಿನಲ್ಲಿ ಕೊಟ್ಟ ಪ್ರಮಾಣಗಳ ಪ್ರಕಾರವೇ ಪ್ರಾರಂಭದಲ್ಲಿ ಆ ೨೮ ದಿನಗಳ ಸಂಬಂಧಿ ಸೀದಾ ಪದಾರ್ಥಗಳ ಪರಿಮಾಣಗಳನ್ನು ಸೀದಾ ತಿಕೀಟಿನ ಮೇಲೆ ಮಾಡಿಕೊಡತಕ್ಕದ್ದು.

ಆದರೆ ಅರ್ಜಿದಾರನು ೨೮ ದಿನಗಳಿಗಿಂತ ಹೆಚ್ಚು ಕಾಲ ಸದರ ಕ್ಷೇತ್ರದಲ್ಲಿ ವಾಸಿಸಿದರೆ ಅವನು ಮುಂದೆ ಇರಬಹುದಾದ ಅವಧಿಯ ಬಗ್ಗೆ ಅವನಿಂದ ಹೊಸ ಅರ್ಜಿಯನ್ನು ತೆಗೆದುಕೊಂಡು ಉಪಕಲಮು (೨) ಮತ್ತು (೩) ಅಥವಾ ಉಪ ಕಲಮು (೪) ಇವುಗಳ ಪ್ರಕಾರ ಸಂಬಂಧಿಸಿದಂತೆ ಕಾಲಕಾಲಕ್ಕೆ ಸೀದಾ ಪದಾರ್ಥಗಳು ದೊರೆಯುವಂತೆ ಹೊಸ ಸೀದಾ ತಿಕೀಟುಗಳನ್ನು ಕೊಡತಕ್ಕದ್ದು.

(೪) ಸೀದಾ ತಿಕೀಟಿನ ಮೇಲೆ ವಾಸದ ಒಟ್ಟು ಅವಧಿಯು ೭ ದಿನಗಳಿಗಿಂತ ಕಡಿಮೆ ಇದ್ದರೆ ಸೀದಾ ತಿಕೀಟುಗಳನ್ನು ಕೊಟ್ಟ ೪ನೇ ದಿನವನ್ನು ಮತ್ತು ಉಳಿದ ಸಂದರ್ಭಗಳಲ್ಲಿ ಸೀದಾ ತಿಕೀಟಿನ ತಾರೀಖಿನಿಂದ ೭ನೇ ದಿನವನ್ನು ಸೀದಾ ಪದಾರ್ಥಗಳನ್ನು ಪಡೆಯಲು ಕೊನೆಯ ದಿನವೆಂದು ಸೀದಾ ಅಧಿಕಾರಿಯು ನಿರ್ದಿಷ್ಟಗೊಳಿಸತಕ್ಕದ್ದು. ಸೀದಾ ತಿಕೀಟು ನಿರ್ದಿಷ್ಟ ಗೊಳಿಸಿದ ಅವಧಿಯ ವರೆಗೆ ಮಾತ್ರ ನಡೆಯುವದು.

(೫) ಸೀದಾ ತಿಕೀಟು ಧಾರಣದಾರನು ಬೆಲೆ ಕೊಟ್ಟು ಸೀದಾ ಪದಾರ್ಥಗಳನ್ನು ಬೇಡಿದಾಗ್ಗೆ ಅವನಿಂದ ಅವನ ಸಹಿಸಿರಿ ಸೀದಾ ತಿಕೀಟನ್ನು ಹಾಜರ ಪಡಿಸಿಕೊಂಡು ಅದರ ಮೇಲೆ ನಿರ್ದಿಷ್ಟ ಪಡಿಸಿದ ಅಧಿಕೃತ ಕಿರಕೋಳ ಹಂಚಿಕೆಗಾರನು ಸೀದಾ ತಿಕೀಟದ ಮೇಲೆ ನಮೂದ ಇದ್ದ ಪರಿಮಾಣಗಳನ್ನು ಮೀರದಷ್ಟು ಸೀದಾ ಪದಾರ್ಥಗಳನ್ನು ಧಾರಣದಾರನಿಗೆ ಪೂರೈಸತಕ್ಕದ್ದು. ಅಧಿಕೃತ ಕಿರಕೋಳ ಹಂಚಿಕೆಗಾರನು ಧಾರಣದಾರನಿಗೆ ಪೂರೈಸಿದ ಪರಿಮಾಣಗಳನ್ನು ಸೀದಾ ತಿಕೀಟಿನ ಮೇಲೆ ಬರೆಯತಕ್ಕದ್ದು ಹಾಗು ನಂತರ ಸೀದಾ ತಿಕೀಟನ್ನು ತನಗೆ ಮುಟ್ಟಿದ ಮೂರು ದಿನಗಳೊಳಗಾಗಿ ಸೀದಾ ಅಧಿಕಾರಿಗೆ ಒಪ್ಪಿಸತಕ್ಕದ್ದು.

(೬) ೮, ೯, ೧೦ ಮತ್ತು ೨೦ ಅ ಕಲಮುಗಳ ಹೇಳಿಕೆಗಳು ಸೀದಾ ಕಾರ್ಡಿಗೆ ಅನ್ವಯಿಸುವಂತೆಯೇ ಸೀದಾ ತಿಕೀಟಿಗೆ ಸಹ ಅನ್ವಯಿಸತಕ್ಕದ್ದು.

೧೧-ಅ (೧) ಕಲಮು ೧೧ರ (೧)ನೇ ಉಪಕಲಮಿನಲ್ಲಿಯದಾವದನ್ನೂ ಲಕ್ಷಕ್ಕೆ ತರದೆ ಸೀದಾ ಅಧಿಕಾರಿಯು ನಿರ್ದಿಷ್ಟ ಪಡಿಸಬಹುದಾದಂಥ ನಮೂನೆಯಲ್ಲಿ ಸೀದಾ ತಿಕೀಟು ದೊರೆಯುವ ಬಗ್ಗೆ ಅರ್ಜಿ ಮಾಡಿದಂಥ ಯಾವನೊಬ್ಬ ವ್ಯಕ್ತಿಗೆ ಜಿಲ್ಹಾ ಮ್ಯಾಜಿಸ್ಟ್ರೇಟರಿಂದ ಮನ್ನಣೆ ಹೊಂದಿದ ಉದ್ದೇಶದ ಬಗ್ಗೆ ತಾತ್ಪೂರ್ತಿಕ ಉಪಯೋಗಕ್ಕಾಗಿ ಯಾವದೇ ಸೀದಾ ಪದಾರ್ಥವು ಬೇಕಾದದ್ದು ನಿಜವೆಂದು ಸೀದಾ ಅಧಿಕಾರಿಗೆ ಖಾತ್ರಿಯಾದಲ್ಲಿ ಅಂಥ ಸೀದಾ ಅಧಿಕಾರಿಯು ಸದರ ವ್ಯಕ್ತಿಗೆ ಸೀದಾ ತಿಕೀಟನ್ನು ಕೊಡಬಹುದು.

(೨) ಉಪಕಲಮು (೧) ರನ್ವಯ ಕೊಡಲ್ಪಟ್ಟ ಸೀದಾ ತಿಕೀಟಿನಲ್ಲಿ ಅರ್ಜಿದಾರನಿಗೆ ಕೊಡಲ್ಪಟ್ಟ ಸೀದಾ ಪದಾರ್ಥಗಳ ಪರಿಮಾಣವನ್ನು ತೋರಿಸತಕ್ಕದ್ದು; ಈ ಪರಿಮಾಣವು ಜಿಲ್ಹಾ ಮ್ಯಾಜಿಸ್ಟ್ರೇಟರಿಂದ ವಿಶಿಷ್ಟ ಉದ್ದೇಶಕ್ಕೆಂದು ಗೊತ್ತುಪಡಿಸಿದ ಪರಿಮಿತಿಯನ್ನು ಮೀರತಕ್ಕದ್ದಲ್ಲ ಹಾಗೂ ಅರ್ಜಿದಾರನು ಅವುಗಳನ್ನು ಪಡೆಯಬಹುದಾದ ಅಧಿಕೃತ ಕಿರಕೋಳ ಹಂಚಿಕೆಗಾರನನ್ನು ತೋರಿಸತಕ್ಕದ್ದು.

(೩) ಸೀದಾ ಅಧಿಕಾರಿಯು ಅಂಥ ಸೀದಾ ತಿಕೀಟಿನ ಮೇಲೆ ಅದನ್ನು ಕೊಟ್ಟ ತಾರೀಖಿನಿಂದ ನಾಲ್ಕನೇ ದಿನವನ್ನು ನಿರ್ದಿಷ್ಟಪಡಿಸತಕ್ಕದ್ದು. ಅಂಥ ದಿನದ ನಂತರ ಸೀದಾ ತಿಕೀಟು ನಡೆಯದು.

(೪) ಕಲಮು ೧೧ನೇಯ ಉಪಕಲಮು (೫) ಮತ್ತು (೬)ರಲ್ಲಿಯ ಹೇಳಿಕೆಗಳು ಇಂಥ ಸೀದಾ ತಿಕೀಟುಗಳಿಗೂ ಅನ್ವಯಿಸುತ್ತವೆ.

೧೨ (೧) ಸೀದಾ ತಾರೀಖಿನ ತರುವಾಯ ಕಲಮ (೨) ರನ್ವಯ ಯಾವನು ಅರ್ಜಿ ಮಾಡುವನೊ ಮತ್ತು ಸದರ ಕ್ಷೇತ್ರದಲ್ಲಿ ೬ ಸೀದಾ ಅವಧಿಗಳಿಗಿಂತ ಹೆಚ್ಚುಕಾಲ ವಾಸಿಸಲು ಇಚ್ಛಿಸುವನೋ ಅಂಥವನಿಗೆ ಅವನು ಈ ಸೀದಾ ಕಾರ್ಡು ಮೊದಲೇ ಕೊಟ್ಟ ಕುಟುಂಬದಲ್ಲಿ ವಾಸವಾಗಿರದಿದ್ದರೆ ಮಾತ್ರ, ೨೪ ಕೂಪನ್ನುಗಳುಳ್ಳ ಸೀದಾ ಕಾರ್ಡು ಕೊಡಲ್ಪಡುವದು. ಸೀದಾ ಕಾರ್ಡನ್ನು ಕೊಡುವ ಪೂರ್ವದಲ್ಲಿ ಅದನ್ನು ಕೊಡುವಾಗ್ಗೆ ಗತಿಸಿಹೋದಂಥ ಮತ್ತು ಯಾವ ಅವಧಿ ಅಥವಾ ಅವಧಿಗಳಲ್ಲಿ ಅರ್ಜಿದಾರನು ಸದರ ಕ್ಷೇತ್ರದಲ್ಲಿ ವಾಸಿಸಲು ಇಚ್ಛೆಯುಳ್ಳವನಿರುವದಿಲ್ಲವೋ ಅಂಥ ಅವಧಿ ಅಥವಾ ಅವಧಿಗಳನ್ನು ಸೂಚಿಸುವ ಕೂಪನ್ನುಗಳನ್ನು ರದ್ದುಗೊಳಿಸತಕ್ಕದ್ದು.

(೨) ಅಂಥ ವ್ಯಕ್ತಿಯು ಸೀದಾ ಕಾರ್ಡು ಕೊಡಲ್ಪಟ್ಟ ಕುಟುಂಬದಲ್ಲಿ ವಾಸಿಸುತ್ತಿದ್ದ ಪಕ್ಷದಲ್ಲಿ ಸೀದಾ ಅಧಿಕಾರಿಯು ಅಂಥ ಮನುಷ್ಯನಿಗೆ ಕುಟುಂಬಕ್ಕೆ ಕೊಟ್ಟ ಸೀದಾ ಕಾರ್ಡಿನ ಮೇಲೆ ಹೆಚ್ಚಿನ ಯುನಿಟ್ಟುಗಳನ್ನು ಮಂಜೂರ ಮಾಡಬೇಕು.

(೩) ಉಪಕಲಮು (೧)ರ ಪ್ರಕಾರ ಸೀದಾ ಕಾರ್ಡು ಕೊಡುವವರೆಗೆ ಅಥವಾ ಉಪಕಲಮು (೨)ರ ಪ್ರಕಾರ ಹೆಚ್ಚಿನ ಯುನಿಟ್ಟುಗಳು ಮಂಜೂರ ಆಗುವ ವರೆಗೆ ೭ನೇ ಕಲಮಿನ ಪ್ರಕಾರ ಅರ್ಜಿದಾರನ ಅರ್ಜಿಯ ಸತ್ಯದ ಬಗ್ಗೆ ಸೀದಾ ಅಧಿಕಾರಿಗೆ ಖಾತ್ರಿಯಾದರೆ ಅಂಥ ಸೀದಾ ಅಧಿಕಾರಿಯು ಅರ್ಜಿದಾರನಿಗೆ ಏಳು ದಿನಗಳಿಗೆ ಮೀರದಷ್ಟು ಅವಧಿಯ ಬಗ್ಗೆ ೧೧ನೇ ಕಲಮಿನ ಪ್ರಕಾರ ಸೀದಾ ತಿಕೀಟನ್ನು ಕೊಡಬಹುದು.

೧೩ (೧) ಸೀದಾಕಾರ್ಡನ್ನು ಕುಟುಂಬದ ವತಿಯಿಂದ ಕುಟುಂಬದ ಮುಖ್ಯಸ್ಥನ ಹೆಸರಿನಲ್ಲಿ ಕೊಡತಕ್ಕದ್ದು ಮತ್ತು ಪ್ರತಿಯೊಂದು ಸೀದಾ ಕಾರ್ಡಿನಲ್ಲಿ ಆಹಾರ ಧಾನ್ಯದ ಹಾಗೂ ಸಕ್ಕರೆಯ ಬಗ್ಗೆ ಕೆಳಗೆ ತೋರಿಸಿದಂತೆ ಯುನಿಟ್ಟುಗಳನ್ನು ತೋರಿಸಬೇಕು.

| | ಆರು ವರ್ಷ ಅಥವಾ ಅದಕ್ಕೂ ಹೆಚ್ಚಿನವಯಸ್ಸಿನ ವ್ಯಕ್ತಿಗೆ | ಆರು ವರ್ಷಕ್ಕಿಂತಕಡಿಮೆ ವಯಸ್ಸಿನ ಕೂಸಿಗೆ |
|---|---|---|
| ಆಹಾರ ಧಾನ್ಯ | ೨ | ೧ |
| ಸಕ್ಕರೆ | ೨ | ೧ |

(೨) ಕುಟುಂಬದ ಮುಖ್ಯಸ್ಥನು (1) ತನ್ನ ಕುಟುಂಬದೊಳಗಿನ ಆರು ವರ್ಷದ ಕೆಳಗಿನ ಕೂಸಿಗೆ ಹೆಚ್ಚಿನ ಸಕ್ಕರೆಯ ಸೀದಾ ಪಡೆಯಲಿಚ್ಛಿಸುತ್ತಿದ್ದರೆ ಅಥವಾ (2) ತನ್ನ ಕುಟುಂಬದೊಳಗಿನ ಶ್ರಮಜೀವಿಯ ಬಗ್ಗೆ ಹೆಚ್ಚಿನ ಆಹಾರ ಧಾನ್ಯದ ಸೀದಾ ಪಡೆಯಬೇಕೆಂಬ ಇಚ್ಛೆಯಿದ್ದರೆ, ಸೀದಾ ಅಧಿಕಾರಿಯು ಗೊತ್ತುಪಡಿಸಿದ ನಮೂನೆಯಲ್ಲಿ ನಿಜವಾದ ಮತ್ತು ಸರಿಯಾದ ಮಾಹಿತಿಯನ್ನು ಕೊಟ್ಟು ಆ ಬಗ್ಗೆ ಅರ್ಜಿಮಾಡಿಕೊಳ್ಳತಕ್ಕದ್ದು. ಸೀದಾ ಅಧಿಕಾರಿಯು ಅರ್ಜಿದಾರನು ಕೊಟ್ಟ ಮಾಹಿತಿಯ ಸತ್ಯತೆಯನ್ನು ಕಂಡುಕೊಳ್ಳಲು ಯೋಗ್ಯಕಂಡ ವಿಚಾರಣೆಯನ್ನು ಕೈಕೊಳ್ಳಬಹುದು ಅಥವಾ ಮಾಡಿಸಬಹುದು. ಮತ್ತು ಉಪಕಲಮು (೧)ರನ್ವಯ ಮಂಜೂರಾದ ಯುನಿಟ್ಟುಗಳ ಹೊರ್ತಾಗಿ ಹೆಚ್ಚಿನ ಯುನಿಟ್ಟುಗಳನ್ನು ಕೆಳಗಿನಂತೆ ಮಂಜೂರ ಮಾಡಬಹುದು.

| | |
|---|---|
| ಆರುವರ್ಷಕ್ಕಿಂತ ಕಡಿಮೆ ವಯಸ್ಸಿನ ಕೂಸಿಗೆ ೧ ಯುನಿಟ್ಟು ಸಕ್ಕರೆ | ದೈಹಿಕ ಶ್ರಮಜೀವಿಗೆ ೧ ಯುನಿಟ್ಟು ಆಹಾರಧಾನ್ಯಗಳು |

೧೪ (೧) ಪ್ರತಿಯೊಬ್ಬ ಸೀದಾಕಾರ್ಡ ಧಾರಣದಾರನು ಮತು ಕುಟುಂಬದ ಯಾವನೇ ಸದಸ್ಯನು ಅಂಥ ಧಾರಣದಾರನ ಅಥವಾ ಅಂಥ ಧಾರಣದಾರನು ಮುಖ್ಯಸ್ಥನಾಗಿರುವಂಥ ಕುಟುಂಬದ ಯಾವದೇ ಸದಸ್ಯನ ಸದರ ಕ್ಷೇತ್ರದಿಂದ ೧೫ ದಿನಗಳಿಗಿಂತ ಹೆಚ್ಚಿನ ಗೈರಹಾಜರಿಯನ್ನು ಬರಹದಿಂದ ಸೀದಾ ಅಧಿಕಾರಿಗೆ ತಿಳಿಸತಕ್ಕದ್ದು ಮುಂಚಿತವಾಗಿಯೇ ನೋಟೀಸಿನಿಂದ ತಿಳಿಸದಿದ್ದಲ್ಲಿ ಗೈರಹಾಜರಿಯಾದ ತಾರೀಖಿನಿಂದ ೩೦ ದಿವಸಗಳೊಳಗಾಗಿಯಾದರೂ ತಿಳಿಸತಕ್ಕದ್ದು ಮತ್ತು ಅದು ಕೆಳಗಿನ ವಿವರಗಳನ್ನು ಒಳಗೊಂಡಿರಬೇಕು.–

೧ ಸೀದಾ ಕಾರ್ಡಿನ ಅನುಕ್ರಮ ನಂಬರ ಮತ್ತು ಕೋಡ ನಂಬರ

೨ ಕುಟುಂಬದ ಮುಖ್ಯಸ್ಥನ ಹೆಸರು ಮತ್ತು ವಿಳಾಸ

೩ ಗೈರಹಾಜರಿದ್ದ ವ್ಯಕ್ತಿಯ ಪೂರ್ಣ ಹೆಸರು ಹಾಗೂ ವಯಸ್ಸು

೪ ಅವನು ಹೋದ ತಾರೀಖು ಮತ್ತು ಗೈರಹಾಜರಿರಬಹುದಾದ ಅಜಮಾಸು ಅವಧಿ

೫ ಕುಟುಂಬಕ್ಕೆ ಕೊಟ್ಟ ಅಧಿಕೃತ ಕಿರಕೋಳ ವ್ಯಾಪಾರಿಯ ಹೆಸರು ಮತ್ತು ಅವನ ಅಧಿಕೃತ ನಂಬರು

(೨) ೬ ರೇಶನ್ ಅವಧಿಗಳಿಗಿಂತ ಹೆಚ್ಚು ಕಾಲದ ವರೆಗೆ ಕುಟುಂಬದ ಮುಖ್ಯಸ್ಥನು ಅಥವಾ ಕುಟುಂಬದ ಬೇರೊಬ್ಬ ಸದಸ್ಯನು ಹೋದರೆ ಅಥವಾ ಗೈರಹಾಜರಿಯಾದರೆ ಕುಟುಂಬದ ಮುಖ್ಯಸ್ಥನಾಗಲೀ ಅಥವಾ ಕುಟುಂಬದ ವ್ಯವಸ್ಥಾಪಕನಾಗಲೀ, ಹೋದ ಅಥವಾ ಗೈರಹಾಜರ ಆದ ತಾರೀಖಿನಿಂದ ನೂರು ದಿವಸಗಳಲ್ಲಿ ಕುಟುಂಬಕ್ಕೆ ಕೊಟ್ಟ ಯುನಿಟ್ಟ ಸಂಖ್ಯೆಗಳಲ್ಲಿ ಕಡಿಮೆ ಮಾಡಲು ಸೀದಾ ಕಾರ್ಡನ್ನು ಸೀದಾ ಅಧಿಕಾರಿಯ ಕಡೆಗೆ ಹಾಜರ ಪಡಿಸತಕ್ಕದ್ದು.

(೩) ಸೀದಾ ಕಾರ್ಡು ಕೊಡಲ್ಪಟ್ಟ ಕುಟುಂಬದಲ್ಲಿ ಯಾವನಾದರೂ , ಮರಣಹೊಂದಿದರೆ ಕುಟುಂಬದ ಮುಖ್ಯಸ್ಥನು ಮತ್ತು ಕುಟುಂಬದ ಮುಖ್ಯಸ್ಥನು ಮರಣಹೊಂದಿದ ಪಕ್ಷದಲ್ಲಿ ಕುಟುಂಬದ ವ್ಯವಸ್ಥಾಪಕನು; ಮರಣದ ತಾರೀಖಿನಿಂದ ೧೦ ದಿವಸಗಳಲ್ಲಿ ಕುಟುಂಬಕ್ಕೆ ಕೊಡಲ್ಪಟ್ಟ ಯುನಿಟ್ಟುಗಳ ಸಂಖ್ಯೆಯಲ್ಲಿ ಕಡಿಮೆ ಮಾಡಲು ಸೀದಾ ಕಾರ್ಡನ್ನು ಸೀದಾ ಅಧಿಕಾರಿಯ ಕಡೆಗೆ ಹಾಜರ ಪಡಿಸಬೇಕು.

(೪) ಕುಟುಂಬದ ಮುಖ್ಯಸ್ಥನಾಗಲೀ ಅಥವಾ ಅವನ ಗೈರಹಾಜರಿಯಲ್ಲಿ ಕುಟುಂಬದ ವ್ಯವಸ್ಥಾಪಕನಾಗಲೀ ಯಾವದೊಂದು ಸೀದಾ ಅವಧಿಯಲ್ಲಿ ಗೈರಹಾಜರ ಇದ್ದ ಕುಟುಂಬದ ಮನುಷ್ಯನಿಗೆ ಮಂಜೂರ ಮಾಡಿದ ಸೀದಾ ಪದಾರ್ಥಗಳನ್ನು ಅಂಥ ಅವಧಿಯಲ್ಲಿ ತೆಗೆದುಕೊಳ್ಳತಕ್ಕದ್ದಲ್ಲ ಅಥವಾ ತೆಗೆದುಕೊಳ್ಳುವಂತೆ ಮಾಡಕೂಡದು.

೧೪ ಅ. ಸೀದಾ ಕಾರ್ಡು ಕೊಡಲ್ಪಟ್ಟಂಥ ಕುಟುಂಬದೊಳಗಿನ ಯಾವನೇ ವ್ಯಕ್ತಿಯು ಕುಟುಂಬವನ್ನು ಬಿಟ್ಟು ಯಾವದೇ ಕಾಲದಲ್ಲಿ ಹೋದರೆ, ಕುಟುಂಬದ ಮುಖ್ಯಸ್ಥನಾಗಲೀ ಅಥವಾ ಅವನ ಗೈರಹಾಜರಿಯಲ್ಲಿ ಕುಟುಂಬದ ವ್ಯವಸ್ಥಾಪಕನಾಗಲಿ ಅಂಥವ್ಯಕ್ತಿಯು ಕುಟುಂಬವನ್ನು ಬಿಟ್ಟ ನಂತರದ ಸೀದಾ ಅವಧಿಯಲ್ಲಿ ಅಂಥ ವ್ಯಕ್ತಿಗೆ ಮಂಜೂರಾದ ಯಾವದೇ ಸೀದಾ ಪದಾರ್ಥಗಳನ್ನು ತೆಗೆದುಕೊಳ್ಳಕೂಡದು ಹಾಗೂ ತೆಗೆದುಕೊಳ್ಳುವಂತೆ ಮಾಡತಕ್ಕದ್ದಲ್ಲ. ಹಾಗೂ ಅವನು ಕುಟುಂಬವನ್ನು ಬಿಟ್ಟು ಹೋದ ತಾರೀಖಿನಿಂದ ೧೦ ದಿವಸಗಳೊಳಗಾಗಿಯೇ ಆ ಸಂಗತಿಯನ್ನು ಸೀದಾ ಅಧಿಕಾರಿಗೆ ತಿಳಿಸತಕ್ಕದ್ದು ಮತ್ತು ಆ ಸೀದಾ ಅಧಿಕಾರಿಯ ಕಡೆಗೆ ಕುಟುಂಬಕ್ಕೆ ಕೊಟ್ಟ ಸೀದಾ ಕಾರ್ಡನ್ನು ಅದರಲ್ಲಿಯ ಯುನಿಟ್ಟುಗಳ ಸಂಖ್ಯೆಯನ್ನು ಕಡಿಮೆ ಮಾಡಲು ಹಾಜರಪಡಿಸತಕ್ಕದ್ದು.

೧೫ ಪ್ರತಿಯೊಬ್ಬ ಸೀದಾಕಾರ್ಡ ಧಾರಣದಾರನು ತನ್ನ ವಿಳಾಸದಲ್ಲಿಯ ಯಾವದೇ ಬದಲಾವಣೆಯನ್ನು ಕೆಳಗಿನ ವಿವರಗಳನ್ನೊಳಗೊಂಡು ಲೇಖಿಯಿಂದ ಸೀದಾ ಅಧಿಕಾರಿಗೆ ತಿಳಿಸತಕ್ಕದ್ದು. ಆ ವಿವರಗಳು—

(ಅ) ಸೀದಾ ಕಾರ್ಡಿನ ಅನುಕ್ರಮ ನಂಬರು ಮತ್ತು ಕೋಡ ನಂಬರು

(ಬ) ಸೀದಾಕಾರ್ಡ ಧಾರಣದಾರನ ಹೆಸರು

(ಕ) ಹಿಂದಿನ ವಿಳಾಸ

(ಡ) ಹೊಸ ವಿಳಾಸ

(ಈ) ಯಾವ ತಾರೀಖಿನಿಂದ ವಿಳಾಸವು ಬದಲಾಗಿದೆಯೋ ಅಥವಾ ಬದಲಾಗುವದೊ ಆ ತಾರೀಖು

ಮುಂಚಿತವಾಗಿಯೇ ತಿಳಿಸದಿದ್ದ ಪಕ್ಷದಲ್ಲಿ, ವಿಳಾಸವು ಬದಲಾವಣೆಯಾದ ತಾರೀಖಿನಿಂದ ಹತ್ತು ದಿನಗಳೊಳಗಾಗಿಯೇ ಆ ಬಗ್ಗೆ ನೋಟೀಸ ಕೊಡತಕ್ಕದ್ದು.

೧೫ ಅ. ೧) ಯಾವನೊಬ್ಬನಿಗೆ ನೇವ್ಹಲ್ ಮಿಲಿಟರಿ, ಅಥವಾ ಏಅರ್ ಫೋರ್ಸ್ ಅಧಿಕಾರಿಗಳಿಂದ ತನ್ನ ಸಲುವಾಗಿ ಅಥವಾ ತನ್ನ ಕುಟುಂಬದ ವ್ಯಕ್ತಿಯ ಸಲುವಾಗಿ ಸೀದಾ-ಪದಾರ್ಥಗಳು ಸಿಗುವವೋ ಅಂಥವನು ತನ್ನ ಸಲುವಾಗಿಯಾಗಲೀ ಅಂಥ ವ್ಯಕ್ತಿಯ ಸಲುವಾಗಿಯಾಗಲಿ ಸೀದಾ ಕಾರ್ಡು ತೆಗೆದುಕೊಳ್ಳಬಾರದು. ಅಥವಾ ತೆಗೆದುಕೊಳ್ಳಲು ಪ್ರಯತ್ನಿಸಕೂಡದು. ಮತ್ತು ಅವನ ಕುಟುಂಬಕ್ಕೆ ಕೊಟ್ಟ ಸೀದಾ ಕಾರ್ಡಿನ ಮೇಲೆ ಉಪಕಲಮು (೨) ರ ಪ್ರಕಾರ ಯುನಿಟ್ಟಿನ ಸಂಖ್ಯೆಯಲ್ಲಿ ಬದಲಾವಣೆಯಾದ ಹೊರತು ಯಾವದೇ ಸೀದಾ ಪದಾರ್ಥಗಳನ್ನು ತೆಗೆದುಕೊಳ್ಳತಕ್ಕದ್ದಲ್ಲ. ಅಥವಾ ತೆಗೆದುಕೊಳ್ಳುವಂತೆ ಪ್ರಯತ್ನ ಮಾಡತಕ್ಕದ್ದಲ್ಲ.

೨) ನೇವ್ಹಲ್, ಮಿಲಿಟರಿ ಅಥವಾ ಏಅರ್ ಫೋರ್ಸ್ ಅಧಿಕಾರಿಗಳಿಂದ ಸೀದಾ ಪದಾರ್ಥಗಳು ಸಿಗತಕ್ಕ ಸೀದಾ ಕಾರ್ಡಿನಲ್ಲಿ ಒಳಗೊಂಡ ಕುಟುಂಬದಲ್ಲಿ ಸಮಾವೇಶವಾದ ಪ್ರತಿಯೊಬ್ಬನು ಸದರ ಸೀವಾ ತನ್ನ ಸಲುವಾಗಿ ಇದ್ದರೂ ಅಥವಾ ಕುಟುಂಬದೊಳಗಿನ ಬೇರೊಬ್ಬರ ಸಲುವಾಗಿದ್ದರೂ ಸಹ, ಸೀದಾ-ಕಾರ್ಡನ್ನು ರದ್ದುಗೊಳಿಸುವದಕ್ಕೋಸ್ಕರ ಅಥವಾ ಕಾರ್ಡಿನಲ್ಲಿ ತೋರಿಸಿದ ಯುನಿಟ್ಟುಗಳ ಸಂಖ್ಯೆಯಲ್ಲಿ ಬದಲಾವಣೆಯಾಗುವದಕ್ಕೋಸ್ಕರ ಅಂಥ ಸೀದಾ ದೊರೆತ ೧೦ ದಿವಸಗಳಲ್ಲಿ ಸೀದಾ ಅಧಿಕಾರಿಗೆ ಸೀದಾ ಕಾರ್ಡನ್ನು ಒಪ್ಪಿಸಬೇಕು, ಅಥವಾ ಒಪ್ಪಿಸುವಂತೆ ಮಾಡಬೇಕು.

೧೬ ಸೀದಾ ಕಾರ್ಡಿನ ಮೇಲಿನ ಪ್ರತಿಯೊಂದು ಕೂಪನ್ನು ಕಲಮು (೧೩) ರನ್ವಯ ಕುಟುಂಬಕ್ಕೆ ಕೊಡಲ್ಪಟ್ಟ ಯುನಿಟ್ಟುಗಳ ಸಂಖ್ಯೆಗೆ ಸರಿಯಿರಬೇಕು:

ಅಪವಾದವೇನಂದರೆ—

ಕಲಮು (೬) ಉಪಕಲಮು (೨) ರ (೨) ನೇ ಅಪವಾದದ ಪ್ರಕಾರ ಯಾವದೇ ಸೀದಾ ಪದಾರ್ಥ ಅಥವಾ ಪದಾರ್ಥಗಳನ್ನು ತೋರಿಸುವಂಥ ಸೀದಾ ಕಾರ್ಡಿನ ಮೇಲಿನ ಕೂಪನ್ನುಗಳು ಅಥವಾ ಅದರಭಾಗಗಳು ರದ್ದು ಮಾಡಲ್ಪಟ್ಟರೆ, ಈ ಕಲಮಿನ ಪೂರ್ತಿ ಸದರ ಅಪವಾದದಲ್ಲಿ ಗೊತ್ತುಮಾಡಿದ ಪ್ರಮಾಣದಂತೆ, ಅಂಥ ಕೂಪನ್ನುಗಳ ಮೇಲೆ ಅಥವಾ ಭಾಗಗಳ ಮೇಲೆ ಅಂಥ ಸೀದಾ ಪದಾರ್ಥದ ಅಥವಾ ಪದಾರ್ಥಗಳ ಸೀದಾ ಧಾರಣ ಮಾಡುವವನಿಗೆ ದೊರೆಯಿತೆಂದು ತಿಳಿಯತಕ್ಕದ್ದು. ಮತ್ತು ಸದರ ಕೂಪನ್ನುಗಳು ಅಥವಾ ಅದರ ಭಾಗಗಳು ರದ್ದಾಗಿದ್ದರೂ ಸಹ ಅಂಥ ಸೀದಾ ಪದಾರ್ಥದ ಅಥವಾ ಪದಾರ್ಥಗಳ ಉಳಿದ ಸೀದಾ ಭಾಗವನ್ನು ಪಡಕೊಳ್ಳಲಿಕ್ಕೆ ಅವನಿಗೆ ಅಧಿಕಾರವಿದೆ. ಉಳಿದ ಭಾಗವೆಂದರೆ ಕಲಮು ೬ ಉಪ ಕಲಮು (೨) ನೇ ಅಪವಾದದ ಪ್ರಕಾರ ಗೊತ್ತು ಮಾಡಿದ ಪ್ರಮಾಣದಂತೆ ಲೆಕ್ಕ ಮಾಡಿದ ಪರಿಮಾಣವು ಕಲಮು ೧೭ ರನ್ವಯ ಗೊತ್ತು ಮಾಡಲ್ಪಟ್ಟ ಪರಮಾವಧಿ ಪ್ರಮಾಣದಂತೆ ಲೆಕ್ಕ ಮಾಡಿ ಬಂದ ಪರಿಮಾಣಕ್ಕೆ ಕಡಿಮೆ ಇರುವದೋ ಅದು, ಅಂದರೆ ಇವೆರಡರ ಅಂತರವು.

೧೭ ಎಲ್ಲ ಆಹಾರ ಪದಾರ್ಥಗಳು ಕೂಡಿ ಆದ ಪರಿಮಾಣವು, ಪ್ರತಿಯೊಂದು ಸೀದಾಕಾರ್ಡಿನ ಮೇಲಿನ ಪ್ರತಿಯೊಂದು ಯುನಿಟ್ಟಿಗೆ ಸಿಗಬಹುದಾದ ಸಕ್ಕರೆ ಮತ್ತು ಕಲ್ಲೆಣ್ಣೆಯ ಪರಿಮಾಣವು ಮತ್ತು ಯಾವದೊಂದು ಆಹಾರ ಧಾನ್ಯದ ಪರಮಾವಧಿ ಪ್ರಮಾಣವು ಅಥವಾ ಅಂಥ ಪರಿಮಾಣದಲ್ಲಿ ಕೂಡಿದ ಒಂದು ವಿಶಿಷ್ಟ ತರದ ಆಹಾರ ಧಾನ್ಯದ ಪರಮಾವಧಿ ಪ್ರಮಾಣವು ಜಿಲ್ಹಾ ಮ್ಯಾಜಿಸ್ಟ್ರೇಟರು ಕಾಲ ಕಾಲಕ್ಕೆ ಗೊತ್ತುಪಡಿಸಿ ಮತ್ತು ಅಧಿಕೃತ ಗ್ಯಾಜೆಟ್ಟಿನಲ್ಲಿ ಪ್ರಸಿದ್ಧಿಸಿದ ಪ್ರಕಾರ ಇರುತ್ತದೆ.

ಅಪವಾದವೇನಂದರೆ—

೧೩ ನೇ ಕಲಮ್ ಉಪಕಲಮ್ (೨) ರ ಪ್ರಕಾರ ಮಂಜೂರಾದ ಆಹಾರ ಧಾನ್ಯಗಳ ಯುನಿಟ್ಟಿನ ಮೇಲೆ ಬೇರೆಯಾಗಿ ಸಿಗಬಹುದಾದ ಪದಾರ್ಥಗಳ ಬಗ್ಗೆ ಬೇರೆ ಪರಿಮಾಣವನ್ನು ಅಥವಾ ಆಹಾರ ಧಾನ್ಯದ ಪರಮಾವಧಿ ಪ್ರಮಾಣವನ್ನು ಅಥವಾ ಒಂದು ವಿಶಿಷ್ಟ ತರದ ಆಹಾರ ಧಾನ್ಯದ ಪ್ರಮಾಣವನ್ನು ಬೇರೆಯಾಗಿ ಗೊತ್ತುಪಡಿಸಬಹುದು.

೧೮ ಯಾರೂ ಕೆಳಗೆ ಬರೆದಂತೆ ಮಾಡಿದ ಹೊರ್ತು ಯಾರ್ವೇ ಸೀದಾ ಪದಾರ್ಥವನ್ನು ಸೀದಾ ಕಾರ್ಡಿನ ಮೇಲೆ ಪಡಕೊಳ್ಳಬಾರದು, ಅವು ಯಾವವೆಂದರೆ,

ಅ) ಸೀದಾ ಕಾರ್ಡಿನ ಮೇಲೆ ಆ ಬಗ್ಗೆ ಇಟ್ಟ ಜಾಗೆಯಲ್ಲಿ ಸಹಿ ಅಥವಾ ತನ್ನ ಹೆಬ್ಬೆಟ್ಟಿನ ಗುರ್ತು ಮಾಡಿದ ಹೊರ್ತು.

ಬ) ಸೀದಾ ಕಾರ್ಡಿನ ಮೇಲೆ ತೋರಿಸಿದ ಅಧಿಕೃತ ಕಿರುಕುಳ ವ್ಯಾಪಾರಸ್ಥನಲ್ಲಿ ಸೀದಾ ಪದಾರ್ಥಗಳು ಸಿಗುವ ಬಗ್ಗೆ ತನ್ನ ಹೆಸರನ್ನು ನೊಂದಾಯಿಸಿದ ಹೊರ್ತು,

ಕ) ಆ ಬಗ್ಗೆ ಸೀದಾ ಅಧಿಕಾರಿಯು ಹೊರಡಿಸಬಹುದಾದ ಬೇರೆ ಯಾವದೇ ಅಪ್ಪಣೆಯನ್ನು ಪಾಲಿಸಿದ ಹೊರ್ತು.

೧೯. ಅಧಿಕೃತ ಕಿರುಕಳ ವ್ಯಾಪಾರಸ್ಥನಲ್ಲಿ ನೊಂದಾಯಿಸಿದ ಸೀದಾ ಕಾರ್ಡು ಧಾರಣ ಮಾಡುವವನು ಬೇಡಿದಾಗ್ಗೆ ಮತ್ತು ಅವನಾಗಲೀ ಅಥವಾ ಅವನ ವತಿಯಿಂದ ಬೆಲೆಯನ್ನು ಕೊಟ್ಟಾಗ್ಗೆ ಮತ್ತು ಯೋಗ್ಯವಾದ ಕೂಪನ್ ಅಥವಾ ಅದರ ಭಾಗವನ್ನು ರದ್ದುಮಾಡಿದ ನಂತರ, ಮತ್ತು ಅದರ ಮೇಲೆ ಪ್ರತ್ಯಕ್ಷವಾಗಿ ಕೊಟ್ಟ ಪರಿಮಾಣವನ್ನು ಬರೆದನಂತರ ವ್ಯಾಪಾರಸ್ಥನು ಧಾರಣಮಾಡುವವನಿಗೆ ಆ ಕೂಪನ್ನಿನ ಮೇಲೆ ಅಥವಾ ಅದರ ಭಾಗದ ಮೇಲೆ ಸಿಗಬಹುದಾದ ಪರಿಮಾಣಕ್ಕೆ ಮಿಕ್ಕದಷ್ಟು ಆಹಾರ ಧಾನ್ಯಗಳನ್ನು ಕೊಡಬೇಕು.

೨೦. (೧೮) ಮತ್ತು (೧೯) ಕಲಮುಗಳಲ್ಲಿ ಏನೇ ಇದ್ದರೂ, ಸೀದಾ ಅಧಿಕಾರಿಗೆ ಅವಶ್ಯ ಕಂಡರೆ ಒಬ್ಬ ಅಧಿಕೃತ ಕಿರುಕಳ ವ್ಯಾಪಾರಿಯಲ್ಲಿ ನೊಂದಾಯಿಸಿದ ಮನುಷ್ಯನ ಹೆಸರನ್ನು ಅಂಥ ವ್ಯಾಪಾರಿಯಿಂದ ಮತ್ತೊಬ್ಬ ಕಿರುಕುಳ ವ್ಯಾಪಾರಿಗೆ ಬದಲಾಯಿಸಬಹುದು. ಮತ್ತು ಸೀದಾ ಕಾರ್ಡಿನಲ್ಲಿ ಆ ಬಗ್ಗೆ ಅವಶ್ಯಬಿದ್ದ ಬದಲಾವಣೆ ಮಾಡಬಹುದು.

೨೦ ಅ. ಯಾವದಾದರೂ ಸೀದಾ ಕಾರ್ಡು, ಅಳಿಸಿಹೋದರೆ, ಕಳೆದರೆ ಅಥವಾ ನಾಶವಾದರೆ ಸೀದಾ ಅಧಿಕಾರಿಯು ಗೊತ್ತುಪಡಿಸಿದ ನಮೂನೆಯಲ್ಲಿ ನಿಜವಾದ ಮತ್ತು ಸರಿಯಾದ ಮಾಹಿತಿಯನ್ನು ಕೊಟ್ಟು ಕುಟುಂಬದ ಮುಖ್ಯಸ್ಥನು ಅಥವಾ ಅವನ ಗೈರಹಾಜರಿಯಲ್ಲಿ ಮನೆತನದ ವ್ಯವಸ್ಥಾಪಕನು ಅದಕ್ಕೆ ಪ್ರತಿಯಾಗಿ ಹೊಸ ಕಾರ್ಡು ದೊರೆಯುವ ಬಗ್ಗೆ ಸೀದಾ ಅಧಿಕಾರಿಗೆ ಅರ್ಜಿ ಮಾಡಬೇಕು. ಒಂದು ವೇಳೆ ಒಂದೇ ಕುಟುಂಬದಲ್ಲಿ ಒಂದಕ್ಕಿಂತ ಹೆಚ್ಚು ಸೀದಾ ಕಾರ್ಡುಗಳ ಕೊಡಲ್ಪಟ್ಟಿದ್ದು, ಅಳಿಸಿ ಹೋದರೆ, ಕಳೆದರೆ, ಅಥವಾ ನಾಶವಾದರೆ ಅಂಥ ಎಲ್ಲ ರೇಶನ್ ಕಾರ್ಡುಗಳ ಬಗ್ಗೆ ಒಂದೇ ಅರ್ಜಿಯನ್ನು ಮಾಡಬಹುದು. ಪ್ರತಿಯೊಂದು ಅರ್ಜಿಯ ಸಂಗಡ ಸೀದಾ ಅಧಿಕಾರಿಗೆ ಎರಡಾಣೆ ಫೀ ಕೊಡಬೇಕು. ಮತ್ತು ಸೀದಾ ಅಧಿಕಾರಿಯು ತನಗೆ ಯೋಗ್ಯ ಕಂಡ ವಿಚಾರಣೆಯನ್ನು ಮಾಡಿದ ನಂತರ ಹೊಸ ಸೀದಾ ಕಾರ್ಡನ್ನು ಅಥವಾ ಕಾರ್ಡುಗಳನ್ನು ಕೊಡಬಹುದು.

## ಪರಿಚ್ಛೇದ III

### ಊಟ ಫಲಾಹಾರದ ಅಂಗಡಿಗಳು

೨೧ ಸದರ ಅಂಗಡಿಗಳ ಪೂರ್ತೆ, ಸೀದಾ ಪರಮಿಟ್ಟುಗಳು ಮತ್ತು ಸೀದಾ ಅಧಿಕಾರಪತ್ರಗಳು ಅಧಿಕೃತ ಸೀದಾ ಕಾಗದಗಳು,

೨೨. ಯಾರೂ ಒಂದಕ್ಕಿಂತ ಹೆಚ್ಚು ಪರಮಿಟ್ ಅಥವಾ ಸೀದಾ ಅಧಿಕಾರ ಪತ್ರಗಳ ಮೇಲೆ ಸೀದಾ ಪದಾರ್ಥಗಳನ್ನು ತೆಗೆದುಕೊಳ್ಳಕೂಡದು. ಅಥವಾ ತೆಗೆದುಕೊಳ್ಳಲಿಕ್ಕೆ ಪ್ರಯತ್ನಿಸಕೂಡದು. ಒಂದು ಅಂಗಡಿಯ ಬಗ್ಗೆ ಒಂದೇ ವೇಳೆಗೆ ಉಪಯೋಗಕ್ಕೆ ಬರುವಂತೆ ಒಂದಕ್ಕಿಂತ ಹೆಚ್ಚು ಸೀದಾ ಪರ್ಮಿಟ್ ಅಥವಾ ಸೀದಾ ಅಧಿಕಾರ ಪತ್ರವು ದೊರೆತಿದ್ದರೆ ಅಂಥ ಅಂಗಡಿಯ ಒಡೆಯ ಅಥವಾ ಸದರ ಅಂಗಡಿಯು ಯಾರ ತಾಬಾದಲ್ಲಿರುವದೊ ಅಂಥ ಮನುಷ್ಯನು ಈ ಸಂಗತಿಯನ್ನು ಸೀದಾ ಅಧಿಕಾರಿಗೆ ಕೂಡಲೇ ತಿಳಿಸಬೇಕು. ಮತ್ತು ಹೆಚ್ಚಿನ ಎಲ್ಲ ಅಂಥ ಪರಮಿಟ್ಟುಗಳನ್ನು ಒಪ್ಪಿಸಬೇಕು.

೨೨ ಅ] ಅಧಿಕೃತ ಅಂಗಡಿಯು ಯಾರ ವಶದಲ್ಲಿರುವದೋ ಅಂಥವನು ಸೀದಾ ಅಧಿಕಾರಿಯು ಅಥವಾ ಆ ಸಂದರ್ಭದಲ್ಲಿ ವಿಶೇಷ ಅಧಿಕಾರ ಪಡೆದ ಬೇರೊಬ್ಬ ಅಫೀಸರರು ಮೇಲಿಂದ ಮೇಲೆ ಹೊರಡಿಸಿದ ಅಪ್ಪಣೆಗಳನ್ನು ಪಾಲಿಸತಕ್ಕದ್ದು.

೨೩. ಒಂದು ಸಂಸ್ಥೆಯ ಸಲುವಾಗಿ ಸೀದಾ ಪದಾರ್ಥಗಳನ್ನು ದೊರಕಿಸಲಿಕ್ಕೆ ಬೇಕಾದ ಸೀದಾ ಪರಮಿಟ್‌ನ್ನು ಸಂಸ್ಥೆಯ ಒಡೆಯನ ಹೆಸರಿನಲ್ಲಿ ಅಥವಾ ಸಂಸ್ಥೆಯು ಯಾರ ವಶದಲ್ಲಿರುವದೋ ಅಂಥವನ ಹೆಸರಿನಲ್ಲಿ ಕೊಡಲ್ಪಡಬೇಕು.

೨೪ ಅಂಥ ಪರಿಮಿಟ್ಟಿನಲ್ಲಿ ೨೪ ಕೂಪನ್ನುಗಳಿರಬೇಕು. ಪ್ರತಿಯೊಂದು ಕೂಪನ್ನಿನ ಅದರಲ್ಲಿ ತೋರಿಸಿದ ಸೀದಾ ಅವಧಿಯ ವರೆಗೆ ಮಾತ್ರ ಊರ್ಜಿತದಲ್ಲಿರುವದು. ಮತ್ತು ಅಂಥ ಪರಮಿಟ್ಟಿನಲ್ಲಿ ತೋರಿಸಿದ ಪ್ರಕಾರ ಸಂಸ್ಥೆಗೆ ವೇಳೆ ವೇಳೆಗೆ ಕೊಟ್ಟ ಯುನಿಟ್ಟುಗಳ ಸಂಖ್ಯೆಗೆ ಸರಿಯಾಗಿರತಕ್ಕದ್ದು.

ಅಪವಾದವೇನಂದರೆ..

ಸೀದಾ ತಾರೀಖಿಗೆ ಅಥವಾ ಸೀದಾ ತಾರೀಖಿನ ನಂತರ, ಸೀದಾ ಅಧಿಕಾರಿಯು ಸೀದಾ ಪರಮಿಟ್ ಧಾರಣ ಮಾಡುವವನ ಹತ್ತರ ಅಥವಾ ಅವನ ವತಿಯಿಂದ ಇದ್ದ ಸೀದಾ ಪದಾರ್ಥಗಳ ಸಂಗ್ರಹವನ್ನು ಅನುಲಕ್ಷಿಸಿ, ಸೀದಾ ಪರಮಿಟ್ಟು ಕೊಡಲ್ಪಟ್ಟ ಸಂಸ್ಥೆಗೆ ಸೀದಾ ತಾರೀಖಿನ ೧೨ ತಿಂಗಳ ಪೂರ್ವದಲ್ಲಿ ಅಂಥ ಪದಾರ್ಥಗಳ ಪ್ರತಿ ತಿಂಗಳದ ಸರಾಸರಿ ಖರ್ಚನ್ನು ಅನುಲಕ್ಷಿಸಿ ಸೀದಾ ಅಧಿಕಾರಿಗಳು ಗೊತ್ತುಮಾಡಿದ ಪ್ರಮಾಣದ ಪ್ರಕಾರ ಅಂಥ ಸೀದಾ ಪರಮಿಟ್ಟಿನ ಮೇಲೆ ಸರಿಯಾದ ಕೂಪನ್ನುಗಳನ್ನು ಅಥವಾ ಅದರ ಭಾಗಗಳನ್ನು ರದ್ದು ಮಾಡಬೇಕು ಅಥವಾ ರದ್ದು ಮಾಡಿಸಬೇಕು. ಮತ್ತು ಅಪವಾದ ವೇನಂದರೆ–

(೧) ನೇ ಅಪವಾದದ ಪ್ರಕಾರ ಸೀದಾ ಪದಾರ್ಥ ಅಥವಾ ಪದಾರ್ಥಗಳನ್ನು ತೋರಿಸುವ, ರೇಶನ್ ಪರಮಿಟ್ಟಿನ ಮೇಲಿನ ಕೂಪನ್ನುಗಳನ್ನು ಅಥವಾ ಅದರ ಭಾಗಗಳು ರದ್ದು ಮಾಡಲ್ಪಟ್ಟಿದ್ದರೆ, ಸೀದಾ ಪರಮಿಟ್ ಧಾರಣ ಮಾಡುವವನಿಗೆ ಅಂಥ ಕೂಪನ್ನುಗಳ ಮೇಲೆ ಮೇಲೆ ಸದರ ಅಪವಾದದ ಪ್ರಕಾರ ಗೊತ್ತು ಮಾಡಿದ ಪ್ರಮಾಣದಂತೆ ಅವನಿಗೆ ದೊರೆಯತಕ್ಕ ಅಂಥ ಸೀದಾ ಪದಾರ್ಥದ ಅಥವಾ ಪದಾರ್ಥಗಳ ಸೀದಾದೊರೆಯಿತೆಂದು ತಿಳಿಯಬೇಕು. ಮತ್ತು ಕೂಪನ್ನುಗಳು ಹಾಗೂ ಅದರ ಭಾಗಗಳು ರದ್ದು ಮಾಡಲ್ಪಟ್ಟಿದ್ದರೂ ಸಹ ಅಂಥ ಕೂಪನ್ನುಗಳ ಮೇಲೆ ಅಥವಾ ಭಾಗಗಳ ಮೇಲೆ ಅಂಥ ಪದಾರ್ಥದ ಅಥವಾ ಪದಾರ್ಥಗಳ ಉಳಿದ ಸೀದಾ ಭಾಗವನ್ನು ಪಡೆಯಲಿಕ್ಕೆ ಹಕ್ಕು ದಾರನಿರುತ್ತಾನೆ.

ಉಳಿದ ಸೀದಾ ಭಾಗವೆಂದರೆ

೧) ನೇ ಅಪವಾದದಲ್ಲಿ ಗೊತ್ತುಪಡಿಸಿದ ಪ್ರಮಾಣದಂತೆ ಲೆಖ್ಖಮಾಡಿ ಬಂದ ಪರಿಮಾಣವು ಕಲಮು (೨೫) ಅಪವಾದದ ಅನ್ವಯ ಗೊತ್ತುಮಾಡಲ್ಪಟ್ಟ ಪರಮಾವಧಿ ಪರಿಮಾಣಕ್ಕೆ ಕಡಿಮೆಬಿದ್ದ ಪರಿಮಾಣವು ಅಂದರೆ ಅವುಗಳ ಅಂತರವು.

ಹಾಗೂ ಅಪವಾದವೇನಂದರೆ—

ಪ್ರಾಂತಿಕ ಸರಕಾರವು ಅಫೀಸಿಯಲ್ ಗ್ಯಾಜಿಟ್ಟಿನಲ್ಲಿ ಪ್ರಸಿದ್ಧ ಮಾಡಿ, ನಿರ್ದಿಷ್ಟವಾದ ಸೀದಾ ಅವಧಿಗಳ ಬಗ್ಗೆ ರದ್ದುಮಾಡಲ್ಪಟ್ಟ ಕೂಪನ್ನುಗಳು ಒಬ್ಬ ವ್ಯಕ್ತಿಯ ಬಗ್ಗೆ ಅಥವಾ ಒಂದು ವರ್ಗದ ಜನರ ಬಗ್ಗೆ ಮತ್ತು ಯಾವದಾದರೂ ಸೀದಾ ಪದಾರ್ಥದ ಅಥವಾ ಎಲ್ಲ ಪದಾರ್ಥಗಳ ಬಗ್ಗೆ ನಿರ್ದಿಷ್ಟಗೊಳಿಸಿದ ಬೇರೆ ಸೀದಾ ಅವಧಿಯಲ್ಲಿಯೂ ಸಹಿತ ಅಮಲಿನಲ್ಲಿರುವವೆಂದು ಪ್ರಸಿದ್ಧ ಪಡಿಸಬಹುದು.

೨೫ ಒಂದು ರೇಶನ್ ಪರಮಿಟ್ಟಿನ ಮೇಲಿನ ಪ್ರತಿಯೊಂದು ಯುನಿಟ್ಟಿಗೆ ದೊರೆಯಬಹುದಾದ ಎಲ್ಲ ಸೀದಾ ಪದಾರ್ಥಗಳ ಪರಿಮಾಣವು ಮೇಲಿಂದ ಮೇಲೆ ಜಿಲ್ಹಾ ಮ್ಯಾಜಿಸ್ಟ್ರೇಟರು ಗೊತ್ತುಪಡಿಸಿ ಅಫೀಸಿಯಲ್ ಗ್ಯಾಜಿಟ್ಟಿನಲ್ಲಿ ಪ್ರಸಿದ್ಧಿಸಿದಂತೆ ಇರುತ್ತವೆ.

ಅಪವಾದವೇನಂದರೆ—

ಅಂಥ ಪ್ರಮಾಣದಲ್ಲಿ ಒಳಗೊಂಡ ಯಾವದಾದರೂ ಆಹಾರ ಧಾನ್ಯದ ಅಥವಾ ಒಂದು ವಿಶಿಷ್ಟ ಜಾತಿಯ ಆಹಾರ ಧಾನ್ಯದ ಪರಮಾವಧಿ ಪ್ರಮಾಣವು, ಸಂಸ್ಥೆಯ ಅವಶ್ಯಕತೆಗಳನ್ನೂ ಮತ್ತು ಸಂಸ್ಥೆಯ ಹತ್ತರ ಇದ್ದ ಆಹಾರಧಾನ್ಯದ ಸಂಗ್ರಹ, ಅಥವಾ ಒಂದು ವಿಶಿಷ್ಟ ಜಾತಿಯ ಆಹಾರಧಾನ್ಯದ ಸಂಗ್ರಹಗಳನ್ನು ಅನುಲಕ್ಷಿಸಿ ಸೀದಾ ಅಧಿಕಾರಿಯಿಂದ ವೇಳೆ ವೇಳೆಗೆ ಗೊತುಮಾಡಲ್ಪಡಬಹುದು.

೨೬ ಯಾವನೊಬ್ಬ ಸೀದಾ ಪರಿಮಿಟ್ಟ ಧಾರಣ ಮಾಡುವವನು ಸದರ ಪರಿಮಿಟ್ಟಿನ ಮೇಲೆ ನಿರ್ದಿಷ್ಟ ಗೊಳಿಸಿದಂತೆ ಅಧಿಕೃತ ಕಿರುಕಳ ವ್ಯಾಪಾರಿಯಲ್ಲಾಗಲೀ ಅಥವಾ ಸೀದಾ ಅಧಿಕಾರಿಯಲ್ಲಾಗಲೀ ತನ್ನ ಹೆಸರನ್ನು ನೋಂದ ಮಾಡಿಸಿದ ಹೊರತು ಸೀದಾ ಪದಾರ್ಥಗಳು ಅಂಥವನಿಗೆ ದೊರೆಯಲಾರವು.

೨೭ ಸೀದಾ ಪರಿಮಿಟ್ಟಿನಲ್ಲಿ ಅಧಿಕೃತ ಕಿರುಕಳ ವ್ಯಾಪಾರಸ್ಥನಲ್ಲಿ ನೊಂದಾಯಿಸಬೇಕೆಂದು ಅಪ್ಪಣೆ ವಿಧಿಸಿದ್ದರೆ, ಅಂಥ ಪರಿಮಿಟ್ಟು ರೇಶನ್ ಕಾರ್ಡು ಇದ್ದಂತೆಯೇ (೧೮) ರಿಂದ (೨೦) ಕಲಮುಗಳು ಅನ್ವಯಿಸುವವು.

೨೮ ೧) ಸೀದಾ ಪರಿಮಿಟ್ಟಿನಲ್ಲಿ ಸೀದಾಅಧಿಕಾರಿಯಲ್ಲಿ ನೊಂದಾಯಿಸಬೇಕೆಂದು ಅಪ್ಪಣೆ ಇದ್ದರೆ, ಅಂಥ ಸೀದಾ ಪರಮಿಟ್ಟ ಧಾರಣಮಾಡುವವನು ಅದರ ಮೇಲೆ, ಅದರಲ್ಲಿ ತೋರಿಸಿದ ಸ್ಥಳದಲ್ಲಿ ತನ್ನ ಸಹಿ ಅಥವಾ ಹೆಬ್ಬಟ್ಟಿನ ಗುರ್ತು ಮಾಡಬೇಕು. ಮತ್ತು ನೊಂದಾಯಿಸುವ ಬಗ್ಗೆ ರೇಶನಿಂಗ ಅಫೀಸರರ ಕಡೆಗೆ ಹಾಜರಪಡಿಸಬೇಕು.

೨) ಪ್ರತಿಯೊಬ್ಬ ಪರಮಿಟ್ಟ ಧಾರಣ ಮಾಡುವವನು ಒಂದು ಸೀದಾ ಅವಧಿಯಲ್ಲಿ ತನಗೆ ಬೇಕಾಗುವ ಪದಾರ್ಥಗಳ "ಇಂಡೆಂಟ್" ಅಂಥ ಸೀದಾ ಅವಧಿಯು ಪ್ರಾರಂಭವಾಗುವದಕ್ಕಿಂತ ೫ದಿವಸ ಮೊದಲು! ಕೊಡಬೇಕು. ಇಂಡೆಂಟ್ ಕೊಟ್ಟ ಸೀದಾ ಪದಾರ್ಥಗಳ ಪರಿಮಾಣವು ಆ ಸೀದಾ ಅವಧಿಯಲ್ಲಿ ಕೂಪನ್ನಿನ ಮೇಲೆ ಸಿಗತಕ್ಕ ಒಟ್ಟು ಪರಿಮಾಣವನ್ನು ಮೀರತಕ್ಕದ್ದಲ್ಲ. ಅಂಥ ಇಂಡೆಂಟಿನ ಆಧಾರದ ಮೇಲೆ ಮತ್ತು ಕೂಪನ್ನುಗಳನ್ನು ರದ್ದುಗೊಳಿಸಿ ಸೀದಾ ಅಧಿಕಾರಿಯು ಸೀದಾ ಅಧಿಕಾರ ಪತ್ರವನ್ನು ಕೊಡಬೇಕು. ಮತ್ತು ಅದರಲ್ಲಿ ದೊರೆಯಬಹುದಾದ ಪರಿಮಾಣವನ್ನು ಮತ್ತು ಅದು ಎಷ್ಟು ಅವಧಿಯವರೆಗೆ ಅಮಲಿನಲ್ಲಿರುವದೋ ಆ ಅವಧಿಯನ್ನು ತೋರಿಸಬೇಕು.

ಅಪವಾದವೇನಂದರೆ—

ಕೂಪನ್ನಿನ ಮೇಲೆ ದೊರೆಯತಕ್ಕ ಪರಿಮಾಣವನ್ನು ಗೊತ್ತುಪಡಿಸುವಾಗ್ಗೆ ಸೀದಾ ಅಧಿಕಾರಿಯು ತನಗೆ ಸರಿ ಕಂಡ ರೀತಿಯಲ್ಲಿ ಅವುಗಳನ್ನು ತೆಗೆದು ಹಾಕಬಹುದು.

೩) ಸೀದಾ ಅಧಿಕಾರ ಪತ್ರವನ್ನು ಧಾರಣ ಮಾಡುವವನು ಇಲ್ಲವೆ ಅವನ ತರ್ಫೆ ಜನರು ಬೇಡಿದಾಗ್ಗೆ ಮತ್ತು ಕಿಮ್ಮತ್ತು ಕೊಡಲಿಕ್ಕೆ ಬಂದಾಗ್ಗೆ, ಮತ್ತು ಅಂಥ ಅಧಿಕಾರ ಪತ್ರವನ್ನು ರದ್ದುಗೊಳಿಸಿ, ಸರಕಾರದ ನಿಯಂತ್ರಣದಲ್ಲಿದ್ದ ಮತ್ತು ಆ ಸೀದಾ ಪದಾರ್ಥಗಳಿಗೆ ಸಂಬಂಧವಿದ್ದ ವಖಾರ ಯಾರ ವಶದಲ್ಲಿರುವದೋ ಅಂಥವನು ಇಲ್ಲವೆ ಆ ಸೀದಾ ಅಧಿಕಾರ ಪತ್ರದಲ್ಲಿ ನಮೂದಿಸಿದ ಅಧಿಕೃತ ಥೋಕ ವ್ಯಾಪಾರಿಯು ಅಂಥ ಅಧಿಕಾರ ಪತ್ರದಲ್ಲಿ ನಮೂದಿಸಿದಂತೆ ಪರಿಮಾಣದಲ್ಲಿ ಸೀದಾ ಪದಾರ್ಥಗಳನ್ನು ಧಾರಣ ಮಾಡುವವನಿಗೆ ಕೊಡಬೇಕು,

೨೯ ೧) ಯಾವನೊಬ್ಬ ಸಂಸ್ಥೆಯಲ್ಲಿ ವಾಸಿಸುವಂಥವನು ಬೇಡಿದಾಗ್ಗೆ ಮತ್ತು ಬೆಲೆಯನ್ನು ಕೊಟ್ಟಾಗ್ಗೆ ಸಂಸ್ಥೆಯು ಯಾರ ವಶದಲ್ಲಿರುವದೋ ಅಂಥವನು ಸೀದಾ ಪದಾರ್ಥಗಳಿಂದ ತಯಾರಿಸಿದ ಆಹಾರವನ್ನು ಅಂಥವನಿಗೆ ಕೊಡಬೇಕು.

೨) ಸಂಸ್ಥೆಯು ಯಾರ ವಶದಲ್ಲಿರುವದೋ ಅಂಥವನು ಸಂಸ್ಥೆಯ ಉಪಯೋಗಕ್ಕೆ ಮಾತ್ರ ಸೀದಾ ಪದಾರ್ಥಗಳಿಂದ ತಯಾರಿಸಿದ ಆಹಾರವನ್ನು ಬೇರೊಬ್ಬ ಗಿರಾಕಿಗೆ ಕೊಡಬಹುದು.

## ಪರಿಚ್ಛೇದ IV

### ಅಧಿಕೃತ ಹಂಚಿಕೆಗಾರರು

೩೦ ಯಾವದೇ ಅಧಿಕೃತ ಹಂಚಿಕೆಗಾರನು ತನಗೆ ಕೊಡಲ್ಪಡದೇ ಇದ್ದ ಸೀದಾ ಕಾರ್ಡು ಅಥವಾ ಸೀದಾ ಪರಮಿಟ್ ಧಾರಣ ಮಾಡುವವನಿಗೆ ಮತ್ತು ಯಾರು ತನಗೆ ಸೀದಾ ಕಾಗದಪತ್ರಗಳನ್ನು ಹಾಜರ ಮಾಡುವದಿಲ್ಲವೋ ಅಂಥವನಿಗೆ ಸೀದಾ ಪದಾರ್ಥಗಳನ್ನು ಮಾರತಕ್ಕದ್ದಲ್ಲ. ಮತ್ತು ಅದಕ್ಕೆ ಸರಿಯಾದ ಕೂಪನ್ನು ರದ್ದು ಮಾಡಗೊಡಬಾರದು.

೩೧.(೧) ಅಧಿಕೃತ ಕಿರಕೋಳ ವ್ಯಾಪಾರಿಯು ತನಗೆ, ಒಂದು ರೇಶನ್ ಅವಧಿಗೆ ಬೇಕಾಗುವ ಆಹಾರ ಧಾನ್ಯಗಳ ಇಂಡೆಂಟ್‌ನ್ನು ಅವನಲ್ಲಿ ನೊಂದಾಯಿಸಿದ ಸೀದಾ ಕಾರ್ಡುಗಳ ಮೇಲೆ ಮತ್ತು ಸೀದಾ ಪರಮಿಟ್ಟುಗಳ ಮೇಲೆ ಮಂಜೂರಾದ ಯುನಿಟ್ಟುಗಳ ಆಧಾರದ ಮೇಲಿಂದ ತಯಾರಿಸಿದ್ದು, ಅಂಥ ಸೀದಾ ಅವಧಿಯು ಪ್ರಾರಂಭವಾಗುವ ೫ ದಿವಸ ಮೊದಲು ಕೊಡಬೇಕು. ಸೀದಾ ಅಧಿಕಾರಿಯು ಇಂಡೆಂಟ್‌ನ್ನು ತಪಾಸಿಸಿ ನೋಡಿದ ಮೇಲೆ ಅಂಥ ವ್ಯಾಪಾರಸ್ಥನಿಗೆ ಬೇಕಾದ ಪೂರೈಕೆಯನ್ನು ಸೀದಾ ಪದಾರ್ಥಗಳಿಗೆ ಸಂಬಂಧಿಸಿದ ಮತ್ತು ಸರಕಾರದವರ ಅಧಿಕಾರದಲ್ಲಿರುವಂಥ ವಖಾರದಿಂದ ಅಥವಾ ಥೋಕ ವ್ಯಾಪಾರಿಯಿಂದ ಪಡೆದುಕೊಳ್ಳಲು ಸೀದಾ ಅಧಿಕಾರ ಪತ್ರವನ್ನು ಕೊಡಬಹುದು.

ಅಪವಾದವೇನಂದರೆ—

ಸೀದಾ ಅಧಿಕಾರಿಯು ತನಗೆ ಸರಿ ಕಾಣಿಸಿದ ರೀತಿಯಲ್ಲಿ ಇಂಡೆಂಟದಲ್ಲಿ ತೋರಿಸಿದ ಪರಿಮಾಣವನ್ನು ರದ್ದುಗೊಳಿಸಬಹುದು.

೨) (೨೮) ನೇ ಕಲಮು ಉಪಕಲಮು (೩) ರಲ್ಲಿಯ ಕಾನೂನುಗಳು ಇಂಥ ಅಧಿಕಾರ ಪತ್ರಗಳಿಗೆ ಸಹಿತ ಅನ್ವಯಿಸುತ್ತವೆ.

೩೨. ಪ್ರತಿಯೊಬ್ಬ ಅಧಿಕೃತ ಥೋಕ ವ್ಯಾಪಾರಿಯು, ೧೯೪೨ ನೇ ಇಸವಿಯ ಫುಡ್‌ಗ್ರೇನ್ಸ ಕಂಟ್ರೋಲ್ ಆರ್ಡರದ ಪ್ರಕಾರ ಪಡಕೊಂಡ ಲಾಯಸೆನ್ಸದಾರನು ಇಡತಕ್ಕ ನಮೂನೆಯಲ್ಲಿ ಸೀದಾ-ಪದಾರ್ಥಗಳ ಸಂಗ್ರಹದ ಲೆಖ್ಖ ಇಡಬೇಕು. ಅವನು ಸೀದಾ ಅಧಿಕಾರಿಗಳು ಅಥವಾ ಆ ಸಂದರ್ಭದಲ್ಲಿ ಅವರಿಂದ ಅಧಿಕಾರ ಪಡೆದ ಬೇರೆ ಅಧಿಕಾರಿಯು ಕೊಟ್ಟ ಅಪ್ಪಣೆಯ ಪ್ರಕಾರ ಅಧಿಕೃತ ಕಿರುಕಳ ವ್ಯಾಪಾರಸ್ಥನಿಗೆ ಅಥವಾ ಬೇರೆ ಜನರಿಗೆ ಕೊಟ್ಟ ಸಂಗ್ರಹದ ಲೆಖ್ಖವನ್ನು ಇಡಬೇಕು.

೩೩. ಪ್ರತಿಯೊಬ್ಬ ಅಧಿಕೃತ ಠೋಕ ವ್ಯಾಪಾರಿಯು ಅಥವಾ ಕಿರುಕಳ ವ್ಯಾಪಾರಿಯು, ಸೀದಾ ಅಧಿಕಾರಿಯು ಅಥವಾ ಆ ಬಗ್ಗೆ ಅವನಿಂದ ವಿಶೇಷ ಅಧಿಕಾರ ಪಡೆದ ಅಧಿಕಾರಿಯು ಸೀದಾ ಪದಾರ್ಥಗಳನ್ನು ಹಂಚುವ ಬಗ್ಗೆ ಮತ್ತು ಅವುಗಳ ಲೆಖ್ಖ-ಪತ್ರಗಳನ್ನು ಇಡುವ ಬಗ್ಗೆ ಸಮಯಾನುಸಾರವಾಗಿ ಕೊಡುತ್ತ ಬಂದ ವಿವಿಧ ಅಪ್ಪಣೆಗಳನ್ನು ಪಾಲಿಸತಕ್ಕದ್ದು.

**೧೯೪೩ ರ ಮುಂಬಯಿ ಸೀದಾ ಆಜ್ಞೆ.**

ನಂ. ೧೬೯ (೧೬) ಬ)ಡಿ. ಆರ್. ೧೯೪೩ ರ ಮುಂಬೈ ಸೀದಾ ಆಜ್ಞೆಯ ೨ ನೆಯ ಕಲಮಿನ (ಅ) ನೆಯ ಉಪಕಲಮಿನ್ವಯ ದೊರೆತ ಅಧಿಕಾರ ನಡೆಸಿ ಮುಂಬೈ ಸರಕಾರವು ಈ ಕೆಳಗಿನ ಆಯಾ ಕ್ಷೇತ್ರಗಳಿಗೆ ಕೆಳಗಿನ ವಸ್ತುಗಳ ಸೀದಾ ಪ್ರಾರಂಭಿಸಲು ೧೯೪೬ ರ ಸಪ್ಟೆಂಬರ ೧೬ನೆಯ ತಾರೀಖಿನ್ನು ನಿರ್ಧರಿಸಿದೆ—

(ಅ) ಉಣಚಗೇರಿಯ ಗಾವಠಾಣಾ ಮತ್ತು ಮಜ್ರೆ ಗಜೇಂದ್ರಗಡ ಗಾವಠಾಣಗಳ ಹದ್ದುಗಳನ್ನೊಳಗೊಂಡ ಕ್ಷೇತ್ರ—

(ಬ) ಉಣಚಗೇರಿಯ ೧, ೨, ೯೪, ೯೫, ೯೬, ೨೩೦, ೨೩೨, ೩೧೪, ೩೧೫, ೨೦, ೨೧, ೨೨, ೩೫, ೩೬, ೩೭, ೩೮, ೩೯, ೪೦, ೪೧, ೪೨, ೬೧, ೬೨, ೬೩, ೬೪, ೬೫, ೬೬, ೬೭, ೬೮, ೨೮೫, ೨೮೬, ೨೮೭, ೨೯೪, ೨೯೫, ೨೯೬, ೨೭೨, ೨೭೩, ೨೯೦, ೨೯೧, ೨೮೯, ೨೯೨, ೨೯೩, ೨೯೯, ೩೦೦, ೨೯೭, ೨೯೮, ೨೪೦, ೩೦೧, ೩೦೨, ೩೦೩, ೩೦೪, ೩೦೫, ೩೦೬, ೩೦೭, ೩೦೮, ೩೦೯, ೩೧೦, ೩೧೧, ೩೧೨, ೩೧೩, ಈ ರೆವ್ಹೆನ್ಯೂ ಸ. ನಂ. ಗಳನ್ನೊಳಗೊಂಡ ಕ್ಷೇತ್ರ.

(ಕ) ಗಜೇಂದ್ರಗಡ- ಉಣಚಗೇರಿ ರಸ್ತೆಯನ್ನೊಳಗೊಂಡ ಕ್ಷೇತ್ರ ಮತ್ತು,

(ಡ) ಉಣಚಗೇರಿಯ ೨೭೨ನೆಯ ಸ. ನಂದ ನೈಋತ್ಯದ ಕೊನೆಗಿರುವ 'ಸರ್ಕಾರಿ ಹಳ್ಳ'ದ ವರೆಗಿನ ಗಜೇಂದ್ರಗಡ- ಗದಗ ರಸ್ತೆಯನ್ನೊಳಗೊಂಡ ಕ್ಷೇತ್ರ;

ಅಕ್ಕಿ ಹಾಗು ಭತ್ತ ಮತ್ತು ಅಕ್ಕಿಹಿಟ್ಟು

ಗೋದಿ ಹಾಗು ಗೋದಿಯ ಹಿಟ್ಟು, ಸಜ್ಜಿಗಿ, ರವಾ, ಮೈದಾ ಮತ್ತು ಆಟಾ. ಜೋಳ ಹಾಗು ಜೋಳದ ಹಿಟ್ಟು, ಸಜ್ಜಿ ಹಾಗು ಸಜ್ಜಿಹಿಟ್ಟು.

ಗೋವಿನಜೋಳ ಹಾಗೂ ಗೋವಿನಜೋಳದ ಹಿಟ್ಟು, ಸಜ್ಜಿಗಿ, ರವಾ, ಮೈದಾ ಮತ್ತು ಆಟಾ; ಆದರೆ ಗೋವಿನ ಜೋಳದ ಹಸರು ತೆನೆ ಹೊರತು ಪಡಿಸಿ.

ಕಲ್ಲುಸಕ್ಕರಿ, ಹರಳು ಸಕ್ಕರೆ, ಪುಡಿಸಕ್ಕರೆ, ಬೋರಾ ಮತ್ತು ಲಿಸ್ಸಾ ಸಕ್ಕರಿ.

ಸೂಚನೆ— ಭಾರತ ಸಂರಕ್ಷಣ ಕಾಯದೆಯ ೧೧೯ನೇ ನಿಯಮದ [೧] ನೇ ಉಪನಿಯಮವನ್ನನುಸರಿಸಿ ೧೯೪೬ ಸಪ್ಟಂಬರ ೧೨ನೇ ತಾರೀಖಿನ ನಂ. ಗಳು ೧೬೯ [೧೬] ಡಿ ಆರ್, ೧೬೯ [೧೬](ಅ) ಡಿ ಆರ್, ಮತ್ತು ೧೬೯ [೧೬] (ಬ) ಡಿ ಆರ್‌ಗಳ ನಾಗರಿಕ ಪೂರೈಕೆ ಖಾತೆಗಳ ಸರಕಾರಿ ಪ್ರಕಟನೆಗಳಲ್ಲಿಯ ಆಜ್ಞೆಗಳ ಪ್ರತಿಗಳನ್ನು ಈ ಕೆಳಗಿನಂತೆ ಪ್ರಸಿದ್ಧಿಸಲಾಗುವದು.

[ಅ] ಮುಂಬಯಿ ಸರಕಾರದ ಗೆಝೆಟನಲ್ಲಿ ಅದನ್ನು ಪ್ರಸಿದ್ಧಿಸಿ.

(ಬ) ಅವನ್ನೇ ಈ ಕೆಳಗಿನ ವೃತ್ತ ಪತ್ರಿಕೆಗಳಲ್ಲಿ ಪ್ರಸಿದ್ಧಿಸಿ,

೧ ಸಂಯುಕ್ತ ಕರ್ನಾಟಕ, ಹುಬ್ಬಳ್ಳಿ

೨ ಕರ್ನಾಟಕಬಂಧು, ಗದಗ.

೩ ಕರ್ಮವೀರ, ಹುಬ್ಬಳ್ಳಿ

[ಕ] ಅವುಗಳ ಕಲಮುಗಳನ್ನು ವಿವರಿಸುವ ಪತ್ರಿಕಾ ಸೂಚನೆಗಳನ್ನು ಹೊರಡಿಸಿ,

(ಡ) ಅವುಗಳ ಪ್ರತಿಗಳನ್ನು ಈ ಆಜ್ಞೆಗಳು ಅನ್ವಯಿಸುವ ಕ್ಷೇತ್ರಗಳಲ್ಲಿಯ ಸ್ಥಳಿಕ ಸರಕಾರಿ ಕಚೇರಿಗಳಲ್ಲಿಯ ನೋಟೀಸ ಬೋರ್ಡುಗಳಿಗೆ ಅಂಟಿಸಿ

ಮುಂಬೈ ಗವ್ಹರ್ನರರ ಆಜ್ಞೆಯ ಮೇರೆಗೆ

**ಎ. ಡಿ. ಗೋರವಾಲಾ,**
**ಸೆಕ್ರೆಟರಿ**

## ಸಿದ್ದಾಪೂರ ತಾಲೂಕದಲ್ಲಿ ಹುಲಿಯ ಹಾವಳಿ
### ೨೦೦ ರೂ. ಬಹುಮಾನ

ಕಾರವಾರ— ಒಂದು ಚಪಲ ಮನುಷ್ಯ ಭಕ್ಷಕ ಹುಲಿಯು ಸಿದ್ದಾಪೂರ ತಾಲೂಕಿನ ಹಳ್ಳಿಗಳಲ್ಲಿ ಹಾವಳಿ ಎಬ್ಬಿಸಿದೆ ಅದು ಎಷ್ಟೋ ದನಕರುಗಳನ್ನಲ್ಲದೆ ಆರು ಜನರ ಪ್ರಾಣಹರಣ ಮಾಡಿದೆ. ಅಧಿಕಾರಿಗಳು ಶಿಕಾರಿ ಪಂಗಡದ ಸಹಾಯದಿಂದ ಅದನ್ನು ಶೋಧಿಸಲು ಪ್ರಯತ್ನಿಸಿದರು. ಆದರೆ ಶಕ್ಯವಾಗಿಲ್ಲ. ಸಶಸ್ತ್ರ ೫೦೦ ಹಳ್ಳಿಗರು ೨೦೦ ಬಂದೂಕಗಳೊಡನೆ ಐದು ಹಳ್ಳಿಯ ಕ್ಷೇತ್ರವನ್ನೆಲ್ಲ ಸಂಚರಿಸಿದರು ಆದರೂ ಹುಲಿಯು ಕಾಣಸಲಿಲ್ಲ ಕಾರವಾರ ಕಲೆಕ್ಟರರು ಅದನ್ನು ಕೊಲ್ಲುವ ಬಂದೂಕ ಲಾಯಸನ್ಸದಾರನಿಗೆ ೨೦೦ ರೂ. ಬಹುಮಾನ ಕೊಡುವದಾಗಿ ಸಾರಿದ್ದಾರೆ.





# ವಾರದ ಪತ್ರ

## ಪರೀಕ್ಷಾ ಕಾಲ

ಇಂಗ್ಲಂಡಿನಲ್ಲಿ ಅನೇಕ ತಿಂಗಳ ನಾಸದ ನಂತರ ಇದೀಗ ಮರಳಿರುವ ಗೆಳೆಯನೊಬ್ಬನು ಆಹಾರ ಬಿಕ್ಕಟ್ಟಿನಿಂದ ಪಾರಾಗಲು ಬ್ರಿಟಿಶ ಜನತೆ ತೋರಿಸುತ್ತಿರುವ ಪ್ರಶಸ್ತವಾದ ಧೈರ್ಯವನ್ನು ಮೊನ್ನೆ ಗಾಂಧೀಜಿಗೆ ವಿವರಿಸುತಿದ್ದನು. ಪ್ರತಿಯೊಬ್ಬನೂ ನಡುಕಟ್ಟಿ ಬಿಗಿಗೊಳಿಸುತಿರುವನು. ಯಾರೂ ಗುಸುಗುಟ್ಟುವದಿಲ್ಲ. ವಿಜಯದ ಬೆಲೆಯಾದ ಕಷ್ಟನಿಷ್ಠುರಗಳಲ್ಲಿ ಬಡವರೊಡನೆ ಪಾಲುಗಾರರಾಗಲು ಶ್ರೀಮಂತರೂ ಹೆಮ್ಮೆಯಿಂದ ಮುಂದೆ ಬರುತ್ತಿದ್ದಾರೆ. ಇದು ಎಲ್ಲರಿಗೂ ಪರೀಕ್ಷಾ ಕಾಲ — ಎಲ್ಲರೂ ಆ ಪರೀಕ್ಷೆಯಲ್ಲಿ ತೇರ್ಗಡೆಯಾಗಲು ಹೆಣಗುತಿದ್ದಾರೆ.

ನಮಗಾದರೂ ಇದು ಅಷ್ಟೇ ಕಠಿನವಾದ ಪರೀಕ್ಷಾ ಕಾಲವೆಂದು ಈ ವಾರ ಗಾಂಧೀಜಿಯವರು ಪ್ರಾರ್ಥನೆಗೆ ನೆರೆದ ಜನಸಮೂಹಕ್ಕೆ ನೆನಪುಕೊಡುತಿದ್ದರು. ಅರ್ಧಶತಕ ಅವಿಶ್ರಾಂತ ಹೋರಾಟದ ನಂತರ ನಾವಿಂದು ಬಯಸಿದ ನಾಡಿನ ಬಾಗಿಲಿಗೆ ಬಂದಂತಿದೆ. ಹೋರಾಟವಿದ್ದಷ್ಟು ಕಾಲ ಆವೇಶ ಹುರುಪಿನಲ್ಲಿ ಹೇಗಾದರೂ ಸಾಗಿಸಿಕೊಂಡು ಹೋಗುತ್ತೇವೆ. ಆದರೆ ನಿಜವಾದ ಪರೀಕ್ಷೆ, ಹೋರಾಟದ ತುಮುಲ ಕೋಲಾಹಲಗಳು ಶಾಂತವಾದ ಮೇಲೆ, ಮುಂದೆ ರಾಶಿಬಿದ್ದಿರುವ ಪ್ರಚಂಡ ಕಾರ್ಯಗಳು ಎದುರಾದಾಗಲೆ, ಪ್ರಾರಂಭವಾಗುವದು. ನಾವು ಇಷ್ಟು ದೀರ್ಘಕಾಲ, ಇಷ್ಟು ಶ್ರಮದಿಂದ ಎದಕ್ಕಾಗಿ ಹೆಣಗಿದೆವೊ ಆ ಸ್ವರಾಜ್ಯದ ಸಾರವನ್ನು ಸಾಧಿಸಬೇಕಾದರೆ ನಮಗೆ ಅವಶ್ಯವಿರುವ ಸಾಧನಸಂಪತ್ತಿ ಯಾವದು? ಅತ್ಯಂತ ವಿನಯ ಮತ್ತು ಸ್ವಾರ್ಥತ್ಯಾಗ- ಇವೀಗ ನಮಗೆ ಬೇಕಾದವುಗಳೆನ್ನುತ್ತಾರೆ ಗಾಂಧೀಜಿ.

## ನೂಲುವ ರಾಟಿ

"ಇದೀಗ ಹಾಡಿದ ಹಾಡಿನಲ್ಲಿ" ಗಾಂಧೀಜಿಯೆಂದರು, "'ಸ್ವ' ವನ್ನು ಕಳೆದುಕೊಂಡವನೇ 'ಪರಾ' ವನ್ನು ಸಂಪಾದಿಸುವನೆಂದು ಕವಿ ಹೇಳಿರುತ್ತಾನೆ." ಇದರ ಅರ್ಥವನ್ನು ನಾವು ಗ್ರಹಿಸಿದರೆ ನಮಗೆ ಬೇಕಾದುದು ಮತ್ತಾವುದೂ ಇಲ್ಲ. ನೂಲುವ ರಾಟಿಯಿಂದ ದೇವರ ಸಾಕ್ಷಾತ್ಕಾರವನ್ನು ಹೇಗೆ ಮಾಡಿಕೊಳ್ಳಬಂದೀತೆಂದು ನೀವು ಕೇಳಬಹುದು. ನಾನು ಮೊದಲೇ ನಿಮಗೆ ಹೇಳಿದಂತೆ, ಜನಕೋಟಿಯೊಡನೆ ಒಂದಾಗಿ ಹೋಗಲು ರಾಟ ನಮಗೆ ಸಹಾಯ ಮಾಡುತ್ತದೆ. ಕೋಟ್ಯಧೀಶರು ತಮ್ಮ ಹಣದಿಂದ ಜಗತ್ತಿನಲ್ಲಿ ಏನನ್ನೂ ಕೊಳ್ಳಬಹುದೆಂದು ತಿಳಿದುಕೊಂಡಿದ್ದಾರೆ. ಆದರೆ ಅದು ಸುಳ್ಳು. ಯಾವ ಕ್ಷಣದಲ್ಲಿ ಮೃತ್ಯು ಬಂದು ಅವರ ಪ್ರಾಣವನ್ನು ನಂದಿಸಬಹುದೆಂಬ ನಿಯಮವಿಲ್ಲ. ದಿನವೂ ಕೆಲವರು ಇರಿತಕ್ಕೆ ಬಲಿಯಾಗುತಿದ್ದಾರೆ. ಆದರೆ ಹಾಗೆ ಪ್ರಾಣ ಕಳೆದುಕೊಳ್ಳುವದನ್ನು 'ಸ್ವ' ತ್ವದ ತ್ಯಾಗವೆಂದು ಕರೆಯಬಾರದು. 'ಸ್ವ' ವನ್ನು ಅಥವಾ 'ಅಹಂಕಾರ'ವನ್ನು ಪರಮಾತ್ಮಪ್ರಾಪ್ತಿಗಾಗಿ ಸ್ವೇಚ್ಛೆಯಿಂದಲೂ ಯಜ್ಞಬುದ್ಧಿಯಿಂದಲೂ ಪರಿತ್ಯಜಿಸಬೇಕು. ರಾಟಿ ಪ್ರತ್ಯೇಕತೆಯನ್ನು ಅಸಾಧ್ಯವಾಗಿ ಮಾಡುತ್ತದೆ. ಅದು ಬಡವರಲ್ಲಿ ಬಡವರನ್ನೊಳಗೊಂಡು ಎಲ್ಲರ ಪ್ರತೀಕ. ಆದುದರಿಂದ ಅದು ನಮ್ಮನ್ನು ವಿನೀತರನ್ನಾಗಿ ಮಾಡಿ ಅಳಿದುಳಿದ ಅಹಮ್ಮನ್ನೂ ಕಿತ್ತೊಗೆಯಹಚ್ಚುತ್ತದೆ.

ಅದು ಸ್ವರಾಜ್ಯದ ಕೀಲಿ ಕೈ. ಆದರೆ ಸ್ವರಾಜ್ಯಕ್ಕಾಗಿ ರಾಟಿ ತಿರುಗಿಸಿಯೂ ಒಳಗೊಳಗೆ ನಸುಹೆಮ್ಮೆ ಪಡದಿರುವದು ಸಾಧ್ಯವೆ? ಹೆಮ್ಮೆಯೆಂಬುದಿದ್ದರೆ ನೂಲುವದರಿಂದ ಆತ್ಮದ ಸ್ವರಾಜ್ಯ ಲಭ್ಯವಾಗದು. ದೇವರ ಸಾಕ್ಷಾತ್ಕಾರವೂ ದೊರಕದು. 'ಸ್ವ'ತ್ವವನ್ನು ಅಥವಾ ತಾನೆಂಬುದನ್ನು ಕಳಚಿ ಒಗೆದರೆ ಅದರಿಂದೊದಗಿದ ಪರಿವರ್ತನೆ ನಮ್ಮ ಬಾಹ್ಯ ಆಚರಣೆಯಲ್ಲಿಯೂ ಪ್ರತಿಬಿಂಬಿತವಾಗುವದು. ಅದು ನಮ್ಮ ಕ್ಷುದ್ರಾತ್ ಕ್ಷುದ್ರತರ ಕೃತಿಗಳಲ್ಲಿಯೂ ಕಾಣಿಸಿಕೊಳ್ಳುವದು. ಬಾಳಿನ ಬಗೆಗಿರುವ ನಮ್ಮ ದೃಷ್ಟಿಯೇ ಪೂರ್ತಿಯಾಗಿ ಬದಲಾಗುವದು. ಎಲ್ಲ ಕ್ರಿಯೆಗಳೂ ತನ್ನ ಅಲ್ಪ 'ಸ್ವ'ಕ್ಕಾಗಿರುವ ಬದಲು ಸರ್ವರಿಗಾಗಿ ಕೈಕೊಳ್ಳಲ್ಪಡುವದು.

"ದೇವರನ್ನು ಕಾಣಲು ಸಾಧಕನು ಎಲ್ಲಿಯೂ ಹೋಗಬೇಕಾಗಿಲ್ಲವೆಂದು ಮುಂದೆ ಈ ಕೀರ್ತನೆ ಹೇಳುತ್ತದೆ" ಎಂದು ಗಾಂಧೀಜಿ ಮುಗಿಸಿದರು. "ಅವನು ನಮ್ಮ ಹೃದಯಗಳಲ್ಲೆ ಇರುವ. ಆದರೆ ಅಲ್ಲಿ ನಾವು 'ಸ್ವ'ವನ್ನು ಅಥವಾ ಅಹಂ— ಅನ್ನು ಪೀಠಕ್ಕೇರಿಸಿದರೆ "ಬಡ" ದೇವರನ್ನು ಪದಚ್ಯುತಗೊಳಿಸಿದಂತೆಯೆ ಸರಿ. ಇಲ್ಲಿ ನಾನು "ಬಡ" ಎಂಬ ವಿಶೇಷಣವನ್ನು ಅರಿತೇ ಉಪಯೋಗಿಸಿದ್ದೇನೆ. ಏಕೆಂದರೆ ಅವನು ರಾಜಾಧಿರಾಜ, ಸರ್ವೋತ್ತಮ, ಸರ್ವಶಕ್ತನಾಗಿದ್ದರೂ ಯಾವನಾದರೂ ತನ್ನತನವನ್ನು ಮರೆತು ಪರಮ ವಿನಯದಿಂದ ಕರೆದರೆ ಅವನು ಸದಾ ಸುಲಭನಾಗಿರುವನು. ಆದುದರಿಂದ ನಾವು ಹೃದಯತಃ "ಬಡವ"ರಾಗಿ ನಮ್ಮೊಳಗೆ ಅವನನ್ನು ಕಂಡುಕೊಳ್ಳೋಣ."

## "ಕರುಣ ಜಲದ ಮಳೆಯ ತಾ!"

ಈ ಹುಚ್ಚಿನ ಕರಾಳ ನೃತ್ಯ ಎಂದಿಗೆ ಮುಗಿದೀತು? ಕಲಕತ್ತೆಯಲ್ಲಿ ಕೊಲೆಗಳು, ಆಗ್ರಾ, ಅಹಮದಾಬಾದ ಮುಂಬಯಿಗಳಲ್ಲಿ ಇರಿತಗಳು. ಇವುಗಳಿಗೆ ಈಗ ವಿಷಪ್ರಯೋಗದ ಹೊಸ ತಂತ್ರವನ್ನೂ ಸೇರಿಸಬೇಕೆ? ಈ ಮುಕುಟಪ್ರಾಯವಾದ ಅಪಕೀರ್ತಿಗೂ ಹಿಂದುಸ್ತಾನ ಭಾಗಿಯಾಗಬೇಕೆ? ಅಥವಾ ಹಿಂದುಸ್ತಾನದ ಗತಿ "ಲೋಭ ಮೂಲಾನಿ ಪಾಪಾನಿ" ಎಂಬ ಹಳೆಯ ಭಾರತೀಯ ನಾಣ್ನುಡಿಗೆ ದೃಷ್ಟಾಂತವಾಗುವದೆ? ಈ ಕರಾಳ ಘಟನೆಗಳಿಂದ ತಮಗಾದ ಯಾತನೆಯನ್ನು ಗಾಂಧೀಜಿಯವರು ಅಕ್ಟೋಬರ ೨ ನೇ ದಿನ, ಇಂಗ್ಲೀಷ ಪಂಚಾಂಗದ ತಮ್ಮ ಹುಟ್ಟಿದ ದಿನದ ದಿವಸ, ಸಂಜೆಯ ಪ್ರಾರ್ಥನಾಸಮಯದಲ್ಲಿ ಕರುಣಾಮಯವಾಗಿ ಹೊರಗೆಡಹಿದರು. ರವೀಂದ್ರ ಠಾಕೂರರ ಮೊಮ್ಮಗಳಾದ ನಂದಿತಾ ಕೃಪಲಾನಿಯವರು ರವೀಂದ್ರರ ಈ ಕವಿತೆಯನ್ನು ಮಧುರವಾಗಿ ಹಾಡಿದರು:

ಜೀವನ ಯಖನ ಶುಕಾಯೆ ಯಾಯ
ಕರುಣಾ ಧಾರಾಯ ಏಸೊ

ಸಕಲ ಮಾಧುರೀ ಲುಕಾಯೆ ಯಾಯ,
ಗೀತ ಸುಧಾರಸೇ ಏಸೊ.

ಕರ್ಮ ಯಖನ ಪ್ರಬಲ ಆಕಾರ
ಗರಜಿ ಉಠಿಯಾ ಢಾಕೇ ಚಾರಿಧಾರ,
ಹೃದಯ ಪ್ರಾಂತೇ, ಹೇ ನೀರವ ನಾಥ,
ಶಾಂತ ಚರಣೇ ಏಸೊ.

ಆಪನಾರೇ ಯಬೇ ಕರಿಯಾ ಕೃಪಣ
ಕೋಣೆ ಪಡೇ ಥಾಕೇ ದೀನ ಹೀನಮನ,
ದುಯಾರ ಖುಲಿಯಾ, ಹೇ ಉದಾರನಾಥ,
ರಾಜಸಮಾರೋಹೇ ಏಸೊ.

ನಾಸನಾ ಯಖನ ವಿಪುಲ ಧೂಲಾಯ
ಅಂಧ ಕರಿಯಾ ಅಬೋಧೇ ಭುಲಾಯ
ಓಹೇ ಪವಿತ್ರ, ಓಹೇ ಅನಿದ್ರ,
ರುದ್ರ ಆಲೋಕೇ ಏಸೊ.

ಈ ಹೃದಯವೊಣಗಿ ಕಲ್ಲಾದರಾಗ
ಬಾ ಕರುಣೆಮಳೆಯ ಗೊಂಡು
ಸವಿ ಸೊಂಪು ಇಂಪು ಉಡುಗಿರಲು ಎಲ್ಲ
ತಾ ಹಾಡಿನಮೃತಬಿಂದು

ಕೆಲಸ ಕಜ್ಜಗಳ ಘೋರ ರೂಪವೆದ್ದು
ಗುಡುಗುಟ್ಟಿ ನನ್ನ ಸುತ್ತೆಲ್ಲ ಮುಗಿದುಬಿದ್ದು
ಕಂಗೆಡಿಸೆ, ನನ್ನ ಸದ್ದಿಲ್ಲದೊಡೆಯ ಬಾರೋ
ಮೆಲುಹೆಜ್ಜೆಯಲ್ಲಿ ನಿನ ಶಾಂತಿಯನ್ನು ತಂದು
ಕಾರ್ಪಣ್ಯದಿಂದ ನನ್ನೆದೆಯು ಮುದುರಿ ಮುದುರಿ
ಮೂಲೆಯನು ಹಿಡಿಯೆ ಕದಮುಚ್ಚಿ ದೈನ್ಯವಡರಿ
ಬಾಗಿಲನು ಒಡೆದು ಬಾ, ಓ ಉದಾರನಾಥ,
ನಿನ ರಾಜಸಂಭ್ರಮವನೆಲ್ಲ ಜತೆಗೆ ಕೊಂಡು
ಬಯಕೆಯೊಂದು ಬಿರುಗಾಳಿಯಾಗಿ ಬಂದು,
ಕಣ್ಕುರುಡುಗೊಳಿಸೆ ಧೂಳೆತ್ತಿ ಹಿಂದುಮುಂದು
ಓ ಪವಿತ್ರ ಬಾ, ಓ ಅನಿದ್ರ ಬಾರೋ
ನಿನ ಸಿಡಿಲು ಮಿಂಚಿನಾ ರುದ್ರಪ್ರಭೆಯಗೊಂಡು

"ಈ ಕೀರ್ತನೆಯ ರೂಪದಲ್ಲಿ ಇಂದು ಪರಮಾತ್ಮನು ನನಗೊಂದು ವಿಶೇಷ ಸಂದೇಶವನ್ನು ಕಳಿಸಿದಂತಿದೆ." ಗಾಂಧೀಜಿ ನುಡಿದರು. "ಇಂದು ಹಿಂದುಸ್ತಾನದಲ್ಲಿ ಜೀವನ ಝರಿ ಇಂಗಿಹೋದಂತೆ ತೋರುತ್ತದೆ. ಕೇಂದ್ರದಲ್ಲಿ ಕಾಂಗ್ರೆಸ ಮಂತ್ರಿಮಂಡಲವಿರುವದರಿಂದ ಎಲ್ಲವೂ ಸರಿಹೋಗಿದೆಯೆಂದು ಬಗೆದರೆ ನಾವು ಮರುಳರಾದೇವು" ಧೂಳಿದ್ದು ಕಣ್ಣು ಕುರುಡರಾಗಿರುವ ನಮ್ಮನ್ನು ಎಚ್ಚರಿಸಲು ಪರಮಾತ್ಮನು ತನ್ನ ರುದ್ರಪ್ರಭೆಯ ಸಿಡಿಲು ಮಿಂಚುಗಳೊಡನೆ ಎರಗಿದ್ದಾನೆಂದು ತೋರುತ್ತದೆ.

## ಗೋವಾ

ಪರಸ್ಪರ ಇರಿತಗಳು ಎಷ್ಟೇ ದುಷ್ಟವಾಗಿದ್ದರೂ ಅವುಗಳನ್ನೇ ಹಿಡಿದುಕೊಂಡು ಜಗಿಯಲು ಗಾಂಧೀಜಿ ಬಯಸಲಿಲ್ಲ. ಜೀವನಝರಿ ಎಷ್ಟು ಬತ್ತಿಹೋಗಿದೆಯೆಂಬುದಕ್ಕೆ ನಿದರ್ಶನ ಕೊಡಲು ಅವರು ಹಿಂದುಸ್ತಾನದ ಒಂದು ಭಾಗವೆ ಆಗಿರುವ ಗೋವಾದತ್ತ ಪ್ರೇಕ್ಷಕರ ಮನಸ್ಸನ್ನು ತಿರುಗಿಸಿದರು. ಡಾ. ರಾಮಮನೋಹರ ಲೋಹಿಯಾರನ್ನು ಅಲ್ಲಿ ಹೋಗಿ ಮುಟ್ಟಿದೊಡನೆ ಬಂಧಿಸಿ ಅಂಧಾರ ಕೊಟಡಿಯಲ್ಲಿ ಹಾಕಿರುವರೆಂದು ಸುದ್ದಿ ಬಂದಿದೆ. ಶ್ರೀ ಕಾಕೋಡಕರರು ನಾಗರಿಕ ಸ್ವಾತಂತ್ರ್ಯವನ್ನು ಬೇಡಿದ ತಪ್ಪಿಗಾಗಿ ಅವರನ್ನು ವಿಚಾರಣೆಗೆ ಗುರಿಪಡಿಸಿ ಕೆಲ ಕಾಲ ಹಿಂದೆ ೮ ವರ್ಷ ಶಿಕ್ಷೆ ಕೊಡಲಾಯಿತು. ಅವರನ್ನು ದ್ವೀಪಾಂತರಕ್ಕೆ ಅಟ್ಟುವ ಸಂಭವವೂ ಇದೆ. ಡಾ. ಲೋಹಿಯಾ ಅವರು ವಿದ್ವಾಂಸರು. ಅವರ ವಿಚಾರಸರಣಿ ತಮ್ಮದಕ್ಕೆ ಸರಿಗೂಡದಿದ್ದರೂ ಅವರ ಬಗ್ಗೆ ತಾವು ಮಾಡತಕ್ಕ ಕರ್ತವ್ಯವೇನೂ ಇಲ್ಲವೆಂದು ಅರ್ಥವಲ್ಲೆಂದು ಗಾಂಧೀಜಿ ಹೇಳಿದರು. ಸಂಬಂಧಪಟ್ಟ ಅಧಿಕಾರಿಗಳೊಡನೆ ಅಷ್ಟಿಷ್ಟು ಪತ್ರವ್ಯವಹಾರ ನಡೆಸಿದರೂ, ಅದರಿಂದ ಫಲವಾಗಿಲ್ಲ. ನಮ್ಮ ಮುಖ್ಯ ಮಂತ್ರಿಗಳಾದ ಪಂಡಿತ ಜವಾಹರಲಾಲರೂ ತಮ್ಮದೇ ರೀತಿಯಿಂದ ಪ್ರಯತ್ನಿಸುತಿದಾರೆ. ವಿದೇಶೀಯನಾದುದರಿಂದ ಗೋವೆಗೆ ಹೋಗಕೂಡದೆಂದು ಅಜ್ಞಾಪಿಸಲ್ಪಡುವದು ಯಾವನೇ ಹಿಂದೀಯನಿಗೆ ಅವಮಾನಕರವಾದ ಸಂಗತಿ. ಗೋವೆಯೂ ಕಾಶ್ಮೀರ ಅಥವಾ ಬೇರಾವ ಹಿಂದೀ ಸಂಸ್ಥಾನದಷ್ಟೇ ಹಿಂದುಸ್ತಾನದ ಅಂಗವಾಗಿದ್ದು, ಡಾ. ರಾಮ ಮನೋಹರ ಲೋಹಿಯಾರಂಥವರು ವಿದೇಶೀಯರಂತೆ ನಡೆಸಿಕೊಳ್ಳಲ್ಪಟ್ಟು ಗೋವೆಗಾಗಲಿ ಅಥವಾ ನೇರವಾಗಿ ಬ್ರಿಟಿಶ ಆಳಿಕೆಯಲ್ಲಿಲ್ಲದ ಹಿಂದುಸ್ತಾನದ ಯಾವುದೇ ಭಾಗದಲ್ಲಾಗಲಿ ಕಾಲಿಡುವ ಅಧಿಕಾರದಿಂದ ವಂಚಿಸಲ್ಪಡುವದು ಅಸಹನೀಯವಾಗಿದೆ.

## ದಸರೆಯ ಒಳ ಅರ್ಥ

ಇಂಥ ಅವಮಾನಗಳೂ ಆಧ್ಯಾತ್ಮಿಕ ದಿವಾಳಿಯೂ ನಮ್ಮನ್ನು ಬಳಸಿರುವಾಗ ದಸರೆಯನ್ನು ಮೇಜವಾನಿ, ಸಂಭ್ರಮ ಸಮಾರೋಹ, ಮೆರವಣಿಗೆ ಮೊದಲಾದ ಸಂತೋಷಚಿಹ್ನಗಳಿಂದಆಚರಿಸುವ ಅಧಿಕಾರ ನಮಗೆಲ್ಲಿದೆಯೆಂದು ಅವರು ಮರುದಿನ ಪ್ರಾರ್ಥನಾ ಸಭೆಯಲ್ಲಿ ಪ್ರಶ್ನಿಸಿದರು. ಯಾವ ದೇಶದಲ್ಲಿ ದಿನವೂ ಇರಿತಗಳು ಆಗುತಿವೆಯೋ ಎಲ್ಲಿ ಬಂಧು ಬಂಧುವನ್ನು ದ್ವೇಷಿಸುವನೊ ಅಲ್ಲಿ ಸುಖಸಂಭ್ರಮಗಳಿರಬಹುದೆ? ದಶಹರಾ ಸಮಾರಂಭವೆಂದರೆ ರಾಮನು ರಾವಣನನ್ನು ಜಯಿಸಿದ್ದರ ಉತ್ಸವ. ಆದರೆ ರಾವಣನನ್ನು ರಾಮನು ಗೆದ್ದದು ಹಿಂಸೆಯಿಂದಲ್ಲ. ವಿಭೀಷಣ ರಾಮನನ್ನು ಕೇಳಿದ: ಅಸ್ತ್ರಶಸ್ತ್ರವಿಹೀನನಾಗಿ, ಕವಚ ವಿರಹಿತನಾಗಿ ನೀನೆಂತು ಬಲಿಷ್ಠನೂ ಅಸ್ತ್ರಶಸ್ತ್ರ ಸನ್ನದ್ಧನೂ ಚತುರಂಗ ಬಲಯುಕ್ತನೂ ಆದ ರಾವಣನನ್ನು ನೀನೆಂತು ಸೋಲಿಸುವೆ? ಹೇಳಿದನು ರಾಮ: ವಿಶ್ವಾಸ, ಪಾರಿಶುದ್ಧ್ಯಗಳೇ ಯುದ್ಧವನ್ನು ಗೆದ್ದುಕೊಡುವವು, ಎಂದು. ನಿಗ್ರಹವೇ ಅವನ ಬಿಲ್ಲು; ಅವನ ವಿಜಯವೆಂದರೆ ಅಸತ್ತಿನ ವಿರುದ್ಧ ಸತ್ತಿನ ವಿಜಯ. "ನೀವು ಧರ್ಮದ ಮತ್ತು ದಸರೆಯ ನಿಜವಾದ ಅರ್ಥವನ್ನು ಗ್ರಹಿಸಿದ್ದರೆ ಮನೆಯಲ್ಲಿ ಸ್ತಬ್ಧ ಪ್ರಾರ್ಥನೆಯೊಡನೆ ಅದನ್ನು ಕಳೆಯಿರಿ." ಎಂದು ಗಾಂಧೀಜಿ ಉಪದೇಶಿಸಿದರು.

ನಿನ್ನ ಅಹಿಂಸಾ ಪ್ರಚಾರ ಹಿಂದುಗಳನ್ನು ಪೌರುಷಹೀನರನ್ನಾಗಿ ಮಾಡುತಿದೆ; ಅವರನ್ನು ಹಾನಿಗೀಡುಮಾಡಿ ತಪ್ಪು ದಾರಿಗೆಳೆಯುತಿದೆ. ನೀನು ಮಹಾತ್ಮನಲ್ಲ ಎಂದು ಬೈದು ಛಂಗಿಸುವ ಪತ್ರಗಳು ತಮಗೆ ಬರುತ್ತಿವೆಯೆಂದು ಗಾಂಧೀಜಿ ಮುಂದುವರಿಯುತ್ತಾ ಹೇಳಿದರು. ತಾವು ಮಹಾತ್ಮರೆಂದು ತಾವೆಂದೂ ಹೇಳಿಕೊಂಡಿಲ್ಲವೆಂದು ಅವರು ಹೇಳಿದರು. ತಾವೂ ಎಲ್ಲರಂತೆ ಸಾಮಾನ್ಯ ಮರ್ತ್ಯ. ತಮ್ಮಿಂದ ಯಾರಿಗೂ ಹಾನಿಯಾಗಿರಲಿಕ್ಕಿಲ್ಲವೆಂದು ಅವರು ಆಶಿಸಿದರು. ತಾವು ಜನರಿಗೆ ಹೇಳುತ್ತಿದ್ದುದೆಲ್ಲ ಅವರ ಮತ್ತು ಸರ್ವರ ಹಿತಕ್ಕಾಗಿಯೆ. ನೀವು ಅಹಿಂಸಾತ್ಮಕವಾಗಿ ನಡೆಯಲು ಅಸಮರ್ಥರಾಗಿದ್ದರೆ, ಹೇಡಿಗಳಾಗಿರುವ ಬದಲು ಹಿಂಸೆಯಿಂದಾದರೂ ಆತ್ಮರಕ್ಷಣೆ ಮಾಡಿಕೊಳ್ಳಿರೆಂದು ತಾವು ಹೇಳುತ್ತ ಬಂದಿರುವದನ್ನು ಗಾಂಧೀಜಿ ನೆನಪಿಗೆ ತಂದುಕೊಟ್ಟರು. ಆದರೆ ಬಂಧುವೊಬ್ಬನ ಕೈಯಿಂದ ನಗುಮೊಗದೊಡನೆ, ಹೃದಯದಲ್ಲಿ ಯಾವದೆ ದೈಹಿಕ ಅಥವಾ ಮಾನಸಿಕ ಪ್ರತಿಹಿಂಸೆಯ ವಿಚಾರ ಇಟ್ಟುಕೊಳ್ಳದೆ, ಸಾಯುವ ಶಕ್ತಿಯೇ ಉಚ್ಚತಮವಾದ ಶೌರ್ಯ. ಬಡಿದಾಡಲು ಹಾತೊರೆಯುವದು ಯಾವಾಗಲೂ ನ್ಯಾಯ್ಯವಲ್ಲ. ಅದು ಆತ್ಮರಕ್ಷಣೆಯಲ್ಲ. ಅದು ಸ್ವಂತಕ್ಕೂ ಅಹಿತ, ದೇಶಕ್ಕೂ ಅಹಿತ, ಮುಂದಾಳುಗಳಲ್ಲಿ ಶುದ್ಧ ಅವಿಧೇಯತೆಯೂ ಹೌದು. ಅದು ಸ್ವರಾಜ್ಯಯಾತ್ರೆಯಲ್ಲಿ ನಮ್ಮನ್ನು ತಡೆಯುತ್ತಿದೆ. ಇಂದು ಯಾರಿಗೂ ಹಬ್ಬದೂಟಮಾಡಲು, ಏಕೆ ಅವಶ್ಯವಿದ್ದುದಕಿಂತ ಒಂದು ತುತ್ತು ಹೆಚ್ಚು ಉಣ್ಣಲು ಯಾರಿಗೂ ಹಕ್ಕಿಲ್ಲವೆಂದು ಗಾಂಧೀಜಿ ಮತ್ತೆ ಹೇಳಿದರು. ನಾವು ಶಿಸ್ತಿನಿಂದ ವರ್ತಿಸಿದರೆ ಹಿಂದುಸ್ತಾನ ಉಳಿದೀತು. ಇಲ್ಲದಿದ್ದರೆ ಹಿಂದುಸ್ತಾನ ಸಾಯುವದು, ನಮಗೆ ತಲೆಯೆತ್ತಿ ನಡೆಯಲಾರದ ಪ್ರಸಂಗ ಬರುವದು.

## ನಮ್ಮ ನೆರೆಯ ಅಫಗಾಣರು

ಆಯಾ ದೇಶಗಳ ಸಂಸ್ಕೃತಿಯ ಫಲವನ್ನು ಮತ್ತು ಶಾಂತಿಯ ಕಲೆಗಳನ್ನು ಸವಿದು ಆ ದೇಶಗಳ ಸೇವೆ ಮಾಡಲು ಹಿಂಸಾತ್ಮಕ ಸೈನಿಕರನ್ನಲ್ಲ ಆದರೆ ಅಹಿಂಸಾತ್ಮಕ ಸೈನಿಕರನ್ನು ಕಳಿಸಬೇಕೆಂದು ಅಂತಃಪ್ರೇರಣೆಯ ಸಮಯದಲ್ಲಿ ತಿಳಿದುಕೊಂಡವರು ಋಷಿಗಳು. ಉಳಿದ ಅನೇಕ ದೇಶಗಳಂತೆ ಅಫಗಾಣಿಸ್ತಾನ ಆರ್ಥಿಕ ಕೊರತೆಗಳಲ್ಲಿ ವಿಶೇಷತಃ ಬಟ್ಟೆಯ ಕೊರತೆಯಲ್ಲಿ ಕೊರಗುತಿದೆ. ಹಿಂದುಸ್ತಾನ ಅಫಗಾಣಿಸ್ತಾನಕ್ಕೆ ಬಟ್ಟೆಗಳನ್ನು ಪೂರಯಿಸಿ ಮಿತ್ರತ್ವದ ಸಹಾಯ ಮಾಡಬಲ್ಲದೊ ಎಂದು ಅಫಗಾಣ ಏಜಂಟ ಜನರಲ್ಲರು ಮೊನ್ನೆ ದಿನ ಪಂಡಿತ ಜವಾಹರಲಾಲರಿಗೆ ಮನವಿಯೊಂದನ್ನು ಬರೆದುಕೊಂಡಿದ್ದರು. ಜವಾಹರಲಾಲರು ಅಫಗಾಣಿಸ್ತಾನದ ಈ ಬಿನ್ನಹದ ಬಗೆ ಗಾಂಧೀಜಿಯವರ ಸಲಹೆ ಕೋರಿದರು. ಸುದೈವದಿಂದ ಪಂಜಾಬದಲ್ಲಿ ೨॥ ಲಕ್ಷ ರೂಪಾಯಿಗಳ ಖಾದಿ ಸಂಗ್ರಹವಿದ್ದು ಅದನ್ನು ಹೊರಗೆ ಕಳಿಸಬಹುದೆಂದು ಕೆಲ ದಿನಗಳ ಹಿಂದೆಯೆ ಪಂಜಾಬದಿಂದ ಗಾಂಧೀಜಿಯವರ ಕಡೆಗೆ ಸೂಚನೆಯೊಂದು ಬಂದಿತ್ತು. ಅಫಗಾಣ ರಾಯಭಾರಿಯು ಅಕ್ಟೋಬರ ೫ ನೇ ತಾರೀಕು ರವಿವಾರ ಗಾಂಧೀಜಿಯವರನ್ನು ಕಂಡಾಗ ಅವರು ಈ ಸಂಗತಿಯನ್ನು ರಾಯಭಾರಿಗಳಿಗೆ ತಿಳಿಸಿದರು. ಅನಂತರ ಅಫಗಾಣ ಮಿತ್ರರು ಬಣ್ಣದ ಹಾಗು ಅಚ್ಚಿನ ಖಾದಿಯ ಕೆಲ ನಮೂನೆಗಳನ್ನು ನೋಡಿ ಯಾವುದನ್ನು ತಮಗೆ ಕಳಿಸಲಾಗುವುದೊ ಅದರಿಂದ ತಾವು ಅತಿ ಸಂತುಷ್ಟರಾಗುವುದಾಗಿ ಹೇಳಿದರು. ಅಲ್ಲದೆ ಅಫಗಾಣಿಸ್ತಾನದಲ್ಲಿಯೇ ಕೈಯಿಂದ ನೂಲುವದನ್ನು ಮತ್ತು ಖಾದಿಯನ್ನು ಸಿದ್ಧ ಮಾಡುವದನ್ನು ಕಲಿಸಿ ಸಂಘಟಿಸುವದಕ್ಕಾಗಿ ತಜ್ಞರನ್ನು ಮತ್ತು ಸಂಘಟಕರನ್ನು ಹಿಂದುಸ್ತಾನ ಕಳಿಸಬಹುದೆಂಬ ಪಂಡಿತ ಜವಾಹರಲಾಲರ ಸೂಚನೆಯನ್ನು ಅವರು ಒಳ್ಳೆ ಆಸ್ಥೆಯಿಂದ ಸ್ವಾಗತಿಸಿದರು. ಅವರು ಕನೂ ಗಾಂಧಿಯವರ ನೂಲುವ ವರ್ಗವನ್ನು ಸಂದರ್ಶಿಸಿದರು. ಚಿಕ್ಕ ಬಾಲ—ಬಾಲಿಕೆಯರು ಒಂದು

೧೪ನೇ ಪುಟಕ್ಕೆ

# ಸತ್ಯ—ಅಹಿಂಸೆಗಳನ್ನು ಕಿತ್ತೊಗೆಯದಿರಿ

ಪತ್ರಲೇಖಕನೊಬ್ಬನು ತನ್ನ ಹೆಸರನ್ನು ತಿಳಿಸಿ ತಾನು ಸೇವಾಸಕ್ತನೆಂದು ಹೇಳಿಕೊಂಡು ಈ ಪ್ರಕಾರ ಬರೆದಿದ್ದಾನೆ.

"ನಾನು ನಿಮ್ಮ ಹರಿಜನ ಬಂಧುವನ್ನು ನಿತ್ಯ ಓದುತ್ತೇನೆ. 'ಸತ್ಯ-ಅಹಿಂಸೆ' ಎಂಬ ಶಬ್ದಗಳನ್ನು ಕಾಂಗ್ರೆಸಿನ ಘಟನೆಯಿಂದ ಕಿತ್ತಿ ಹಾಕಬೇಕೆಂದು ಕೆಲ ದಿನಗಳಿಂದ ನಾನು ಹೇಳುತ್ತ ಬಂದಿದ್ದೇನೆಂದು ನೀವು ಶ್ರೀ ಶಂಕರ ರಾವ ದೇವ ಇವರಿಗೆ ಇತ್ತೀಚಿಗೆ ಉತ್ತರಿಸಿದ್ದೀರಿ.

"ಹೀಗಾದಲ್ಲಿ ಜನರಿಗೆ ಕಾಂಗ್ರೆಸಿನಲ್ಲಿಯ ನಂಬಿಗೆ ಕಳೆದುಹೋಗುವದು. ಕಾಂಗ್ರೆಸಿನ ಕೈಯಲ್ಲಿ ಅಧಿಕಾರವಿಲ್ಲದಿದ್ದಾಗ ಅದಕ್ಕೆ ಸತ್ಯ ಅಹಿಂಸೆಗಳ ಅಗತ್ಯವಿತ್ತು. ಆದರೆ ಈಗ ಅಧಿಕಾರ ದೊರೆತೊಡನೆ ಆ ಶಬ್ದಗಳನ್ನು ಕಾಂಗ್ರೆಸಿನ ಘಟನೆಯಿಂದ ಕಿತ್ತಿಹಾಕಬೇಕೆಂಬ ವಿಚಾರ ನಡೆಸಿದೆ ಎಂಬ ಭಾವನೆ ಜನರಲ್ಲಿ ಹುಟ್ಟಬಹುದು. ಮುಸ್ಲಿಂ ಲೀಗಿನ ಪ್ರತ್ಯಕ್ಷ ಹೋರಾಟವನ್ನು ಎದುರಿಸುವದಕ್ಕಾಗಿಯೆ ಈ ಎರಡು ಶಬ್ದಗಳನ್ನು ಕಿತ್ತಿಹಾಕಲಾಗುತ್ತಿದೆಂದೂ ಕೆಲವರು ಊಹಿಸಬಹುದು.

"ಈ ಎರಡು ಶಬ್ದಗಳನ್ನು ಕಾಂಗ್ರೆಸಿನ ಘಟನೆಯಿಂದ ಕಿತ್ತಿಹಾಕಿದರೆ ಕಾಂಗ್ರೆಸು ಇವುಗಳ ಮೂಲಕ ಇದು ವರೆಗೆ ಗಳಿಸಿದ ಉನ್ನತ ಸ್ಥಾನದಿಂದ ಕೆಳಗುರುಳುವದು. ಅದು ತನ್ನ ಪ್ರತಿಷ್ಠೆಯನ್ನು ಕಳೆದುಕೊಳ್ಳುವದು. ಸತ್ಯ-ಅಹಿಂಸೆಗಳನ್ನು ಬಿಟ್ಟು ಒಂದಡಿಯನ್ನಾದರೂ ನಾನು ಮುಂದಿಡಲಾರೆನೆಂದು ನೀವು ನಿಮ್ಮ ಬಗ್ಗೆ ಅನೇಕ ಸಲ ಹೇಳಿದ್ದೀರಿ. ಕಾಂಗ್ರೆಸು ಇವುಗಳಿಗೆ ಅಂಟಿಕೊಂಡಿದ್ದರಿಂದಲೆ ಜನರು ಕಾಂಗ್ರೆಸಿಗರನ್ನು ವಿಶ್ವಾಸಿಕರು, ದಯಾವಂತರು, ಸೇವಾಬುದ್ಧಿಯುಳ್ಳವರು, ಶೂರರು ಎಂದು ಭಾವಿಸುವದಿಲ್ಲವೆ? ಬೇರುಗಳನ್ನು ಕಿತ್ತೆಸೆದರೆ ಗಿಡವು ನೆಲಕ್ಕುರುಳಲೆ ಬೇಕು. ಬೇರುಗಳು ನಾಶ ಹೊಂದದೆ ಹೆಚ್ಚೆಚ್ಚು ಆಳವಾಗಿ ಇಳಿಯುವಂತೆ ನೀವು ನೋಡಿಕೊಳ್ಳಬೇಕು.

"ಆದ್ದರಿಂದ ಈ ತತ್ವಗಳನ್ನು ಪ್ರತಿಯೊಬ್ಬ ಕಾಂಗ್ರೆಸ್ಸಿಗನೂ ಅನುಸರಿಸುವಂತೆ ನೀವು ಒತ್ತಾಯ ಪಡಿಸಬೇಕು. ಇದನ್ನೊಪ್ಪದವನು ಕಾಂಗ್ರೆಸ್ಸಿನಿಂದ ಹೊರಬೀಳಬೇಕು."

ಅಹಿಂಸೆಯ ಕೈವಾರಿಯಾದ ನಾನು ಸತ್ಕಾರ್ಯವನ್ನು ಮಾಡೆಂದಾದರೂ ಹೇಗೆ ಎರಡನೆಯವರನ್ನು ಒತ್ತಾಯಪಡಿಸಲಿ? ಪ್ರಮಾದಗಳನ್ನೆಸಗಬಾರದೆಂದು ದಾಸನಾಗಿರುವದಕ್ಕಿಂತ ಸ್ವತಂತ್ರನಾಗಿ ಪ್ರಮಾದಗಳನ್ನು ಮಾಡಿದರೂ ತಪ್ಪಿಲ್ಲವೆಂದು ಆಂಗ್ಲನೊಬ್ಬನು ಹೇಳಿಲ್ಲವೆ? ನಾನೀ ಮಾತನ್ನು ಒಪ್ಪುತ್ತೇನೆ. ಇದರ ಕಾರಣ ಸುಸ್ಪಷ್ಟವಾಗಿದೆ. ಒತ್ತಾಯದಿಂದ ಸಜ್ಜನನಾದವನು ಸುಧಾರಿಸಲಾರನು; ಆದರೆ ಇನ್ನೂ ಕೆಟ್ಟುಹೋಗುತ್ತಾನೆ. ಮತ್ತು ಒತ್ತಾಯವನ್ನು ಇಲ್ಲದಾಗಿಸಿದ ಕೂಡಲೆ ಎಲ್ಲ ದೋಷಗಳು ಇನ್ನೂ ಹೆಚ್ಚು ರಭಸದಿಂದ ವ್ಯಕ್ತವಾಗುತ್ತವೆ.

ಇಷ್ಟಲ್ಲದೆ ಯಾರೂ ಸರ್ವಾಧಿಕಾರಿಯಾಗಬಾರದು. ಸತ್ಯ—ಅಹಿಂಸೆಗಳನ್ನು ಅನುಸರಿಸಲು ಕಾಂಗ್ರೆಸು ಕೂಡ ತನ್ನ ಅನುಯಾಯಿಗಳನ್ನು ಒತ್ತಾಯಪಡಿಸಲಾರದು. ಆತ್ಮಸಂತೋಷದಿಂದ ಇವನ್ನು ಸ್ವೀಕರಿಸಬೇಕಾಗುವದು.

ಮುಸ್ಲಿಂ ಲೀಗು ಹಿಂಸಾಹಿಂಸೆಗಳ ಲೆಕ್ಕವಿಲ್ಲದ ತನ್ನ ಪ್ರತ್ಯಕ್ಷ ಹೋರಾಟದ ಕಲ್ಪನೆ ಕೂಡ ಮಾಡದಿರುವಾಗ ಅಂದು ಸುಮಾರು ಒಂದು ವರ್ಷದ ಹಿಂದೆ ನಾನು ಈ ಎರಡು ಶಬ್ದಗಳನ್ನು ಕಾಂಗ್ರೆಸ ಘಟನೆಯಿಂದ ಕಿತ್ತಿಹಾಕಬೇಕೆಂದು ಸೂಚಿಸಿದ್ದೆ. ಆದ್ದರಿಂದ ನನ್ನ ಸೂಚನೆಗೂ ಲೀಗಿನ ಠರಾವಿಗೂ ಯಾವ ಸಂಬಂಧವಿಲ್ಲ. ಆದರೆ ನನ್ನ ಶಬ್ದಗಳಿಗೆ ಅಪಾರ್ಥ ಕಲ್ಪಿಸುವವರಿಗೆ ತಿಳಿಸಿ ಹೇಳುವ ಸಾಮರ್ಥ್ಯ ನನ್ನಲ್ಲಿಲ್ಲ.

ನಾನೀ ಪ್ರಕಾರ ಸೂಚಿಸಲು ಪ್ರಬಲವಾದ ಕಾರಣಗಳಿವೆ. ಸತ್ಯ—ಅಹಿಂಸೆಗಳ ಮರೆಯಲ್ಲಿ ಕಾಂಗ್ರೆಸ್ಸು ಅಸತ್ಯ—ಹಿಂಸೆಗಳನ್ನು ಬಚ್ಚಿಡಲಿಕ್ಕಿಲ್ಲ. ಇದೊಂದೆ ಕಾರಣ ಸಾಕಲ್ಲವೆ? ಕಾಂಗ್ರೆಸ್ಸಿಗರು ಧೂರ್ತರಲ್ಲದಿದ್ದರೆ ಅವರು ಇವೆರಡು ತತ್ವಗಳಿಗೆ ಅಂಟಿಕೊಳ್ಳುವದಲ್ಲದೆ ಬೇರೆ ರೀತಿಯಲ್ಲಿ ವರ್ತಿಸಲಾರರು.

ಕಾಂಗ್ರೆಸ್ಸು ಅಧಿಕಾರ ಸ್ವೀಕರಿಸಿದ ಕೂಡಲೆ ತನ್ನ ಉತ್ಕರ್ಷಕ್ಕೆ ಕಾರಣವಾದ ಈ ತತ್ವಗಳನ್ನು ತಿರಸ್ಕರಿಸಬೇಕೆಂದು ನಾನೆಂದೂ ಬಯಸುವದಿಲ್ಲ. ಅಧಿಕಾರಯುಕ್ತವಾದ ಕಾಂಗ್ರೆಸು ಇವನ್ನು ಬಿಟ್ಟುಕೊಟ್ಟರೆ ಅದರ ಪ್ರಭಾವ ಲಯವು ಮಸುಕಾಗುವದು.

ಒರಿದು ಮಾತಿನ ಬಗ್ಗೆ ನಾವು ಸದಾ ದಕ್ಷರಾಗಿರಬೇಕು. ಕಾಂಗ್ರೆಸ ಘಟನೆಯಲ್ಲಿ ಇಲ್ಲದ್ದನ್ನು ಅನುಸರಿಸುವದನ್ನು ತಡೆಯಲು ಯಾವ ಕಟ್ಟಳೆಯೂ ಇಲ್ಲ. ಆದ್ದರಿಂದ ಈ ಎರಡು ಶಬ್ದಗಳನ್ನು ಘಟನೆಯಿಂದ ಕಿತ್ತಿ ಹಾಕಿದರೂ ಎಲ್ಲ ಕಾಂಗ್ರೆಸ್ಸಿಗರಿಲ್ಲದ್ದರೂ ಬಹುಜನ ಕಾಂಗ್ರೆಸ್ಸಿಗರು ಸತ್ಯ-ಅಹಿಂಸೆಗಳನ್ನು ಸ್ವಸಂತೋಷದಿಂದ ಅನುಸರಿಸುವರೆಂದು ನಾನು ನಿಜವಾಗಿ ನಂಬಿದ್ದೇನೆ.

ಪತ್ರಲೇಖಕನೂ ಬಿಟ್ಟುಕೊಟ್ಟ ಒಂದು ವಿಷಯವನ್ನು ನಾನು ಸ್ಪಷ್ಟೀಕರಿಸುತ್ತೇನೆ. 'ಶಾಂತ, ಮತ್ತು ಕ್ರಮಬದ್ಧ' ಎಂಬ ಶಬ್ದಗಳು ಘಟನೆಯಲ್ಲಿವೆ. ಇವುಗಳ ಅರ್ಥವು 'ಸತ್ಯದ ಮತ್ತು ಅಹಿಂಸೆಯ' ಎಂದು ಆಗುತ್ತಿದ್ದಿಲ್ಲವಾದರೆ ಅವಕ್ಕೆ ಅದೇ ಅರ್ಥವಿದೆಂದು ಹೇಳಲು ನನಗೆ ಅಧಿಕಾರವಿಲ್ಲ. ಕಾಂಗ್ರೆಸು ಅದನ್ನು ಧ್ಯೇಯವೆಂದಲ್ಲ. ಆದರೆ ಧೋರಣೆಯೆಂದು ಸ್ವೀಕರಿಸಿದೆ. ಅವನ್ನು ಇಡುವ, ಇಲ್ಲವೆ ಕಿತ್ತೆಸೆಯುವ ಬಗ್ಗೆ ನನ್ನ ಅಧಿಕಾರ ಪ್ರಶ್ನೆಯೆ ಹುಟ್ಟುವದಿಲ್ಲ. ಅದಿರುವವರೆಗೆ ಧೋರಣೆಯೇ ಧ್ಯೇಯವಾಗುತ್ತಿದೆ. ಆದರೆ "ಶಾಂತ" ಎಂದರೆ ಹಿಂಸಾತ್ಮಕ ಮತ್ತು "ಕ್ರಮಬದ್ಧ" ಎಂದರೆ ಅಸತ್ಯದ ಎಂಬ ಅರ್ಥವನ್ನು ಕಲ್ಪಿಸುತ್ತಿದ್ದರೆ ನನ್ನ ಸೂಚನೆಯು ನಿರರ್ಥಕವಾದಂತೆ.

ಹೊಸದಿಲ್ಲಿ — ಮೋ. ಕ. ಗಾಂಧಿ

೨೧—೯—೪೬

( ಗುಜರಾತಿಯಿಂದ )

## ವಾರದ ಪತ್ರ

(೧೪ನೇ ಪುಟದಿಂದ)

ವಾರದೊಳಗಾಗಿಯೆ ಈ ಕಲೆಯನ್ನು ಕಲಿಯಬಹುದೆಂಬದನ್ನು ತಿಳಿದು ಅವರಿಗೆ ಯಥಾಸುಖ ಆಶ್ಚರ್ಯವೆನಿಸಿತು. ಅಫಗಾಣಿಸ್ತಾನದಲ್ಲಿ ೨ ಗಿರಣಿಗಳಿವೆ. ಅವುಗಳಲ್ಲಿ ಸುಮಾರು ೬೦ ಲಕ್ಷ ವಾರ ಬಟ್ಟೆ ತಯಾರಾಗುತ್ತದೆ. ಅಲ್ಲಿ ಒಂದು ಬಗೆಯ ಖಾದಿ ತಯಾರಾಗುತಿದೆ. ಆದರೆ ಅದು ಬಹಳ ಒರಟಾಗಿದೆ. ನೇಯುವ ಕಲೆ ಅಲ್ಲಿ ಇನ್ನೂ ಜೀವಂತವಿದೆ. ಆದರೆ ನೂಲುವ ಕಲೆ ಸತ್ತುಹೋಗಿದೆ. ಅಮೇರಿಕೆಯ ಉದ್ದ ಎಳೆಯ ಹತ್ತಿ ಅಫಗಾಣಿಸ್ತಾನದಲ್ಲಿ ಜವಳಿಗೆ ಬೇಕಾಗುವಷ್ಟಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಬೆಳೆಯಲಾಗುತ್ತದೆ. ಅದರಲ್ಲಿ ಕೆಲ ಭಾಗ ಹಿಂದುಸ್ತಾನಕ್ಕೆ ರಫ್ತಾಗಿ ಹೋಗುತಿದೆ. ಉಣ್ಣೆ ನೂಲುವದು ಸಾಧಾರಣವಾಗಿ ಸಾರ್ವತ್ರಿಕ. ಚಳಿಗಾಲ ದಿನಗಳಲ್ಲಿ ಪ್ರತಿಯೊಬ್ಬರಿಗೆ ಬೇಕಾದಷ್ಟು ಬಿಡುವಿದ್ದು ಆ ದಿನಗಳನ್ನು ಯೋಗ್ಯ ರೀತಿಯಿಂದ ಉಪಯೋಗಿಸಿದ್ದಾದರೆ ಅಫಗಾಣಿಸ್ತಾನ ಬಟ್ಟೆಯ ಸಂಬಂಧದಲ್ಲಿ ಸ್ವಾವಲಂಬಿಯಾಗಬಲ್ಲುದು.

ಪಂಡಿತಜಿಯವರು ದೇಶದಲ್ಲಿ ಮೊದಲನೆ ಮಂತ್ರಿಗಳು ಎಂದುಸುರಿದರು ಗಾಂಧೀಜಿ ತಮ್ಮ ಪ್ರಾರ್ಥನಾ ಸಭೆಯಲ್ಲಿ ಯಾರೊಬ್ಬರ ಅವಶ್ಯಕತೆಯನ್ನೂ ಅವರು ಕಿವುಡುಗೊಳಿಸಲಾರರು. ಇಂದು ನಾವು ತಲೆತಿರುಕರಾಗಿ ಒಬ್ಬರೊಬ್ಬರು ಹೊಡೆದಾಡುತಿರುತ್ತೇವೆಂಬದನ್ನು ನಾಚಿಕೆಯಿಂದ ಒಪ್ಪಬೇಕಾಗಿದೆ. ಅಹಿಂಸಾಮಾರ್ಗದಿಂದ ಇಂತು ಸ್ವಾತಂತ್ರ್ಯದ ಸಮೀಪಕ್ಕೆ ಹಿಂದುಸ್ತಾನ ಬಂದುದಕ್ಕಾಗಿ ಅಭಿನಂದನಪರ ತಂತಿಗಳು ಜಗತ್ತಿನಲ್ಲಿಯ ಬೇರೆ ಬೇರೆ ಜನರಿಂದ ಬರುತಿವೆ. ಈ ಪರಿಸ್ಥಿತಿಯಲ್ಲಿ ನಾವು ಎರಡನೆಯವರ ವೈರಿಗಳೆಂತಾಗಬಲ್ಲೆವು? ನಮ್ಮ ಬಾದಶಹಾಖಾನರು ಪಠಾಣರು. ಗಡಿಯ ಆಚೆಗಿರ

೨೮

ಅವರ ಪಠಾಣ ಬಂಧುವು ಬಟ್ಟೆಯನ್ನು ಕೇಳಲು ಬಂದಿರುವನು. ಅವನಿಗೆ ಸಹಾಯ ಮಾಡುವದು ಹಿಂದುಸ್ತಾನದ ಕರ್ತವ್ಯ. ಈ ಸ್ನೇಹಸರಿತ್ ಹಿಂದುಸ್ತಾನದಿಂದ ಹರಿಯಬಲ್ಲದು. ಹರಿಯತಕ್ಕದ್ದು. ಹಿಂದುಸ್ತಾನ ತನ್ನ ಬಟ್ಟೆಗಳನ್ನು ಪೂರೈಸಿಕೊಂಡು ನಯವಾದ ಮಲಮಲು ಜಗತ್ತಿನಲ್ಲೆಲ್ಲ ದೊರೆಯುವಂತೆ ಮಾಡುತಿದ್ದ ಕಾಲವೊಂದಿತ್ತು. ಆದರಿಂದು ನಮ್ಮ ದೇಶದಲ್ಲಿಯೆ ನಾವು ನಗ್ನರಾಗಿರುವೆವು ಇದೆಲ್ಲ ಕೇವಲ ಆಲಸ್ಯದ ಪರಿಣಾಮವು. ಯಾವ ದೇಶವು ಸುಲಭವಾಗಿ ತನ್ನ ಅನ್ನ ವಸ್ತ್ರಗಳನ್ನು ಪೂರೈಸಬೇಕಾಗಿತ್ತೊ ಅಂಥ ದೇಶದಲ್ಲಿ ಹಣವು ಕಾಳನ್ನಾಗಲಿ ಬಟ್ಟೆಯನ್ನಾಗಲಿ ಕೇಳಲಾರದು. ನಾವೆಲ್ಲ ಈ ಹೊಣೆಯನು ಹೊತ್ತುಕೊಂಡು ನೂಲುವುದನ್ನು ಕೈಕೊಂಡರೆ ನಮ್ಮ ಆವಶ್ಯಕತೆಗಳನ್ನು ಪೂರೈಸಿಕೊಳ್ಳುವದಲ್ಲದೆ ಬಟ್ಟೆಯ ಅವಶ್ಯಕತೆಯಿದ್ದ ಉಳಿದ ದೇಶಗಳಿಗೂ ಅದನ್ನು ಪೂರೈಸಬಲ್ಲೆವು ಎಂದು ಗಾಂಧೀಜಿ ಅಭಿಪ್ರಾಯಪಟ್ಟರು.

### ಜಯಂತಿ ಅಭಿನಂದನೆಗಳು

ಜಯಂತಿ ಅಭಿನಂದನೆಗಳಿಗೆ ವಿಶಿಷ್ಟವಾದ ಮಹತ್ವವಿದೆ. ಆಯಾ ಮನುಷ್ಯರ ಬಗ್ಗೆ ಅವು ಪಡುತಿರುವ್ವ ಅಭಿಪ್ರಾಯದಿಂದ ಆ ಅಭಿನಂದನಪರ ಸಂದೇಶಗಳಿಗೆ ಮಹತ್ವವಿಲ್ಲ ಆದರೆ ಆ ಕಾಲದ ಧ್ಯೇಯ ಧೋರಣೆ ಆಸೆ ಆಕಾಂಕ್ಷೆಗಳ ಬಗ್ಗೆ ಅವರು ಪಡುತ್ತಿರುವ ಅಭಿಪ್ರಾಯ ಮಾಡುತ್ತಿರುವ ಟೀಕೆಯ ದೃಷ್ಟಿಯಿಂದ ಅವು ಮಹತ್ವದ್ದಾಗಿವೆ. ನಾಯಕರನ್ನು ಗೌರವಿಸುವ ಮಾರ್ಗದಿಂದಲೆ ಆ ಯುಗದ ಮಹತ್ವ ಗೊತ್ತಾಗುವದಿಲ್ಲವೆ? ಇಂದು ಜಗತ್ತು ಐಕ್ಯಕ್ಕಾಗಿ ಕೊರಗುತಿದೆಂಬುದು ಗಾಂಧಿಜಿಯವರಿಗೆ ಬಂದ ಅಭಿನಂದನಪರ ಸಂದೇಶದ ಕೆಳಗಿನ ಮಾದರಿಗಳಿಂದ ಗೊತ್ತಾಗುವದು.

"ಹಿಂದುಸ್ತಾನದ ಸ್ವಾತಂತ್ರ್ಯಕ್ಕಾಗಿ ನೀವು ಇಷ್ಟು ವರ್ಷಗಳನ್ನು ಮುಡುಪಾಗಿರಿಸಿರುವಿರಿ. ನಿಮ್ಮ ಪರಿಶ್ರಮದ ಪರಿಣಾಮವಾಗಿ ನಿಮ್ಮ ಜನರು ಸಂಪೂರ್ಣ ಸುಖವನ್ನು ಹೊಂದುವ ಸುದಿನವನ್ನು ನೋಡುವದಕ್ಕಾಗಿ ನೀವು ದೀರ್ಘಕಾಲ (ಕನಿಷ್ಠ ೧೨೫ ವರ್ಷ) ಬಾಳುವಿರೆಂದು ಆಸಿಸುತ್ತೇವೆ."

"ಇವು ಒಳ್ಳೆ ಕಠಿನ ದಿನಗಳು. ಆದರೂ ನಾವು ಸರಿಯಾದ ದಾರಿಯಲ್ಲಿ ಪ್ರಗತಿ ಹೊಂದುತಿರುವೆವು."

"ಇನ್ನು ಕೆಲವು ದಟ್ಟ ಹೆಜ್ಜೆಗಳನ್ನಿಟ್ಟರೆ ಕೊನೆಯ ಕೆಲಸ ಮುಗಿಯುವದು. ಅನಂತರ ನಾವೆಲ್ಲ ಹಿಂದೀ ಸ್ವಾತಂತ್ರ್ಯದ ಮೊದಲನೆಯ ಸಂಭ್ರಮದಲ್ಲಿ ಸಂತೋಷಿಸುವಾ."

ಇಲ್ಲಿ ಮತ್ತೊಂದು ಮಾದರಿ- "ಗಾಂಧೀಯವರೆ, ಸುರಾಸುರರ ಶಕ್ತಿಗಳ ತಿಕ್ಕಾಟದ ಈ ಜಗತ್ತಿನಲ್ಲಿ ಅಕ್ಟೋಬರ ತಿಂಗಳ ನಿಮ್ಮ ಜಯಂತಿ ನಾನು ನನ್ನ ವಂದನೆಗಳನ್ನು ಸಮರ್ಪಿಸುತ್ತೇನೆ ಮತ್ತು ಹೃತ್ಪೂರ್ವಕ ಅಭಿನಂದನೆಗಳನ್ನರ್ಪಿಸುತ್ತೇನೆ. ಮುಂದಿನ ವರ್ಷ ನೀವು ನಿಮ್ಮ ಭವಿಷ್ಯವಾಣಿಯು ಮತ್ತಷ್ಟು ಫಲಿಸಿದ್ದನ್ನು ನೋಡುವಂತಾಗಲಿ ನಿಮ್ಮ ಪ್ರಿಯ ದೇಶದ ಸ್ವಾತಂತ್ರ್ಯ ಇನ್ನಷ್ಟು ಪ್ರಗತಿ ಹೊಂದಿ ಶಾಂತಿಯನ್ನು ಪಡೆಯಲಿ. ನಮ್ಮ ನರಕವಿ ವಿಲಿಯಂ ಬ್ಲೇಕ ಹೀಗೆ ಬರೆದಿರುವನು.

ಹೊನ್ನಸರಪಣಿಯೆಳೆಯ ನಿನಗೀವೆ ನಾನಿಂದು
ಸುತ್ತದನು ಚಂಡಿನಾಕಾರದಲ್ಲಿ
ಅದು ನಿನ್ನನೊಯ್ಯುವದು ಜೇರೂಸಲೇಮದಾ
ಗೋಡೆಗಳಲಡಗಿರುವ ಸಗ್ಗದಲ್ಲಿ

ಬ್ಲೇಕ ಕವಿಯು ಜೆರುಸಲೇಮು ಕಲ್ಪನಾಸ್ವರ್ಗಸಾಮ್ರಾಜ್ಯದ ಪ್ರತೀಕವೆಂದು ಭಾವಿಸಿದ್ದ. ಕೊನೆಯಲ್ಲಿ ಪೃಥ್ವಿಯಲ್ಲಿ ಅದು ಸ್ಥಾಪಿತವಾಗುವದೆಂದು ಅವನ ನಂಬಿಕೆಯಾಗಿತ್ತು. ಕ್ಷಮೆಯೆ ಅವನ ತಾರಕಸೂತ್ರವಾಗಿತ್ತು.

ಇದರಲ್ಲಿ ನಿಮ್ಮಲ್ಲಿ ಮತ್ತು ಕವಿ ಬ್ಲೇಕರಲ್ಲಿ ಸಾಮ್ಯವಿದೆ. ನೀವಾದರೂ ಈ ಸೂತ್ರವನ್ನು ನಮ್ಮ ಕೈಯಲ್ಲಿ ಕೊಟ್ಟಿರುವಿರಿ. ನಮ್ಮ ನಿತ್ಯ ವ್ಯವಹಾರದ ಉಪಯೋಗಕ್ಕಾಗಿ ಅದು ಇರುವದು. ಪರಿಸ್ಥಿತಿಯನ್ನೆಲ್ಲ ಸ್ವರ್ಗ ಸಾಮ್ರಾಜ್ಯ ಸುಖವನ್ನು ನಿಯುವಂತೆ ಈ ಸೂತ್ರ ನಮ್ಮನ್ನು ಸುರಕ್ಷಿತ ಸ್ಥಳಕ್ಕೆ ಮುಟ್ಟಿಸುತಿದೆ.

"ನಿಮ್ಮ ವ್ಯಕ್ತಿತ್ವ ಮಾನವ ಜನಾಂಗವನ್ನು ಸಮೃದ್ಧಗೊಳಿಸಿದೆ; ಅಂಧಃಕಾರದಲ್ಲಿ ಯಾವಾಗಲೂ ಪ್ರಕಾಶ ಬೀರುವ ಜ್ಯೋತಿಯಾಗಿದೆ ನಿಮ್ಮ ಜೀವನ. ನಿಮ್ಮ ಜಯಂತ್ಯುತ್ಸವದ ಈ ಸಮಯದಲ್ಲಿ ನೀವು ಸುಖಸಮೃದ್ಧಿಯನ್ನು ಪಡೆಯಿರಿ."

ದೂರದ ಅಮೇರಿಕೆಯಿಂದ ಬಂದ ಈ ಸಂದೇಶ ಹೆಚ್ಚು ಹೃದಯಂಗಮವಾಗಿದೆ.

"ನಾನಿರುವ ಫಾರ್ಟಫರ್ಟದಂಥ ಜಗತ್ತಿನಲ್ಲಿಯ ಸಣ್ಣ ಊರುಗಳು ಕೂಡ ನಿಮ್ಮ ಜೀವನದಿಂದ ಊರ್ಜಿತವಾಗಿವೆಂದು ನಿಮಗೆ ಬರೆದು ತಿಳಿಸಲು ಇಂದು ಭೋಜನದ ಕಾಲಕ್ಕೆ ನನ್ನಲ್ಲಿ ಸ್ಫೂರ್ತಿಯುಂಟಾಗಿದೆ.

"ಹಿಂದೂ ಧುರೀಣರಾದ ನೀವು ಜೀಸಸ್ ನಮ್ಮ ಕ್ರಿಸ್ತನ ಮಾರ್ಗವನ್ನನುಸರಿಸಿರೆಂದು ಜಗತ್ತಿಗೆ ಮತ್ತು ಪಾಲಿಸ್ತಾನಕ್ಕೆ ಎಚ್ಚರಿಸುವದು ಕದಾಚಿತ್ ಅಷ್ಟೊಂದು ಆಶ್ಚರ್ಯಕರವೆನಿಸಲಿಕ್ಕಿಲ್ಲ. ಜೀಸಸ್ ಇಂದು ಜೀವಂತನಿದ್ದು ಕದಾಚಿತ್ ನಿಮ್ಮ ಮುಖಾಂತರ ಮಾತಾಡುತಿರಬಹುದು.

"ನಿಮ್ಮ ತಲೆಮಾರಿನಲ್ಲಿಯೆ ನಾನಿದ್ದುದೊಂದು ನನ್ನ ಸುದೈವವೆಂದು ನಾನು ಭಾವಿಸುತ್ತೇನೆ."

"ಜಗತ್ತು ಪ್ರಗತಿ ಹೊಂದುತಿದೆಂದೂ, ನಾವು ಹಿಂದುಸ್ತಾನದ ಮತ್ತು ಚೀನದ ಜನತೆಯ ಸಮೀಪಕ್ಕೆ ಬರುತಿರುವೆವೆಂದೂ ನಿಮಗೆ ಅನಿಸುತ್ತದೆ ಮತ್ತು ನಿಮಗೆ ಗೊತ್ತಿದೆಂದು ನನಗೆ ಖಚಿತವಾಗಿದೆ.

### ಕೊನೆಯಲ್ಲಿ

ಬೆಳಗಿನ ಮೊದಲು ಕಗ್ಗತ್ತಲೆ. ಪರಿಸ್ಥಿತಿ ಸುಧಾರಿಸುವ ಮೊದಲು ಹೆಚ್ಚು ಕೆಡುವುದುಂಟು. ಹಿಂದುಸ್ತಾನದ ಆಕಾಶವನ್ನು ಈ ವರೆಗೆ ಮುತ್ತಿದ್ದ ಕಾರ್ಮೋಡಗಳು ಕೊನೆಗಾದರೂ ಬಯಲಾಗುವವೆಂಬುದು ಕೊರಗುವ ಜಗತ್ತಿನ ಪ್ರಾರ್ಥನೆ ಮತ್ತು ಸದ್ಭಾವನೆಗಳ ಪರಿಣಾಮದಿಂದ ಎಂದು ತೋರುವದು ಇದನ್ನು ಬರೆಯುತಿರುವಾಗಲೆ ನಡುಗಾಲ ಸರಕಾರದಲ್ಲಿ ಮುಸ್ಲಿಂ ಲೀಗ ಪ್ರತಿನಿಧಿಗಳು ಸೇರುವ ಲಕ್ಷಣಗಳು ಕಾಣಬರುತಿವೆ. ಈ ಬಗ್ಗೆ ಮಾತುಕತೆಗಳು ನಡೆಯುತಿವೆ ಎಂದು ಗಾಂಧೀಜಿ ತಮ್ಮ ಇಂದಿನ ಸೋಮವಾರದ ಪ್ರಾರ್ಥನಾ ಸಭೆಯಲ್ಲಿ ಹಿಂದುಸ್ತಾನಿಯಲ್ಲಿ ಬರೆದರು. ಇದರಿಂದ ಮುಸ್ಲಿಂಲೀಗಿನವರು ಮಂತ್ರಿಮಂಡಳವನ್ನು ಸೇರುವರೆಂಬ ಆಸೆ ಅನೇಕರಿಗೆ ಹುಟ್ಟಿತು. ಈ ಸಲದ ಕಾಂಗ್ರೆಸ ಮತ್ತು ಲೀಗುಗಳಲ್ಲಿಯ ಐಕ್ಯ ೧೯೧೭ ರಲ್ಲಿಯಕಿಂತ ಮತ್ತು ಖಿಲಾಫತ ಚಳವಳಿಯ ಕಾಲಕ್ಕಿಂತ ಹೆಚ್ಚು ಗಾಢವಾಗಲೆಂದು ನಾವೆಲ್ಲ ಪ್ರಾರ್ಥಿಸಬೇಕೆಂದು ಅವರು ಆಶಿಸಿದರು. ಒಬ್ಬರನ್ನೊಬ್ಬರು ಬಯ್ಯುವದನ್ನು ಮತ್ತು ಕೊಲ್ಲುವುದನ್ನು ನಿಲ್ಲಿಸಿ ಎಲ್ಲರೂ ಶಾಂತಿಯಿಂದ ಇರುವಂತಾಗಲೆಂದು ಆಸಿಸಿದರು.

ಹೊಸದಿಲ್ಲಿ — ಪ್ಯಾರೇಲಾಲ

೭-೧೦-೧೯೪೬

## ಮಣ್ಣಿನ ಗುಡಿಸಲುಗಳು

(೮ ನೇ ಪುಟದಿಂದ)

ಈ ಪದ್ಧತಿಯಿಂದ ದೊರಕಿದ ಉತ್ತಮ ಫಲಗಳನ್ನು ಇನ್ನಷ್ಟು ಸುಧಾರಿಸಬೇಕಾದರೆ ಮಣ್ಣನ್ನು ಒದ್ದೆ ಮಾಡಲು ಕೂಡಿಸುವ ನೀರಿಗೆ ಕೆಲವು ಪದಾರ್ಥಗಳನ್ನು ಬೆರಸಬಹುದು. ಅಲ್ಲದೆ ಸಾಧನಗಳನ್ನೂ ಕಟ್ಟಡದ ಅಚ್ಚುಗಳನ್ನೂ ಇನ್ನಷ್ಟು ಸುಧಾರಿಸಬಹುದು. ಈ ವಿಷಯದಲ್ಲಿ ಪ್ರಯೋಗಗಳು ನಡೆದಿದ್ದು ಅವುಗಳ ಪರಿಣಾಮವನ್ನು ಕಾಲಕಾಲಕ್ಕೆ ಹೊರಗೆಡಹಲಾಗುವದು.

—ಮಾರಿಸ ಫ್ರೆಕ್ಸ್

ಕಾಂಗ್ರೆಸ್ ಮತ್ತು ಲೀಗಗಳಲ್ಲಿ ಒಪ್ಪಂದದ ಬಗ್ಗೆ ನಡೆದ ಮಾತುಕತೆಗಳು ಮುರಿದವೆಂದೂ ಆದರೂ ವಾಯಿಸರಾಯರ ಆಮಂತ್ರಣದಂತೆ ಮುಸ್ಲಿಂ ಲೀಗು ನಡುಗಾಲ ಸರಕಾರದಲ್ಲಿ ಸೇರುವುದೆಂದೂ ಇದೀಗ (ಶುಕ್ರವಾರ ರಾತ್ರಿ ೮ ಗಂಟೆ) ಸುದ್ದಿ ಬಂದಿದೆ.

## ಮುಂಬಯಿ

ಶ್ರೀ ಕರ್ವೆಯವರು ಸ್ಥಾಪಿಸಿದ ಎಶೀಯ ಮಹಿಳಾ ವಿದ್ಯಾಪೀಠದ ಪದವಿಗಳನ್ನೆಲ್ಲ ಇತರ ವಿಶ್ವವಿದ್ಯಾಲಯಗಳ ಪದವಿಗಳಿಗೆ ಸಮಾನವೆಂದು ಗಣಿಸಲಾಗುವದೆಂದು ಮುಂಬಯಿ ಸರಕಾರದವರು ಆಜ್ಞೆ ಹೊರಡಿಸಲಿರುವರೆಂದು ಮುಂಬಯಿ ಮುಖ್ಯ ಮಂತ್ರಿಗಳಾದ ಶ್ರೀ ಬಾಳಾಸಾಹೇಬ ಖೇರರು ಮಹಿಳಾ ವಿದ್ಯಾಪೀಠದ ಹೀರಕ ಮಹೋತ್ಸವದ ಕಾಲಕ್ಕೆ ಸಾರಿದರು.

ಹಿಂದೂ ಮಹಾಸಭೆಯ ಕಾರ್ಯಕಾರೀ ಮಂಡಳದ ಸಭೆ ಸೇರಿ ಹೈದರಾಬಾದ ಸತ್ಯಾಗ್ರಹದ ವಿಷಯದ ಕೊನೆಯ ನಿರ್ಣಯವನ್ನು ಬ್ಯಾ. ಸಾವರಕರರ ಸಲಹೆಯ ಮೇರೆಗೆ ಮಾಡಬೇಕೆಂದು ನಿರ್ಧರಿಸಲಾಯಿತು.

ಕಾಂಗ್ರೆಸ್ ಜನರಲ್ ಸೆಕ್ರೆಟರಿಗಳಾದ ಡಾ. ಕೇಸಕರರು ಮಹಾರಾಷ್ಟ್ರದಲ್ಲಿ ಕಾಂಗ್ರೆಸ ಸಂಸ್ಥೆಗಳ ಸಂಘಟನೆ ಸಂಬಂಧದಲ್ಲಿ ೧೦ ದಿನ ಪ್ರವಾಸ ಕೈಕೊಂಡಿದ್ದಾರೆ.

ಸಂಬಳ ಹೆಚ್ಚಿಸದಿದ್ದರೆ ನವಂಬರ ೪ ರಿಂದ ಸಂಪು ಹೂಡುವ ನೋಟೀಸನ್ನು ಸುರತ ವಿದ್ಯುಚ್ಛಕ್ತಿ ಕಂಪನಿಯ ನೋಕರರು ಕೊಟ್ಟಿದ್ದಾರೆ.

ಹಿಂದುಸ್ತಾನ ಸರಕಾರದ ವಶದಲ್ಲಿ ಯುದ್ಧಕಾಲದಲ್ಲಿ ಕೊಂಡ ಸಾವಿರಗಟ್ಲೆ ವಿದ್ಯುತ್ ಬೀಸಣಿಕೆಗಳಿದ್ದು ಅವುಗಳನ್ನು ಮುಂದೆ ಮೂರನೆ ವರ್ಗದ ಡಬ್ಬಿಗಳಲ್ಲಿ ಹೇಗೆ ಹಚ್ಚಬಹುದೆಂಬ ಬಗ್ಗೆ ಅವರು ವಿಚಾರ ನಡೆಸಿರುವರೆಂದು ತಿಳಿಯುತ್ತದೆ.

ಮುಂಬಯಿಯಲ್ಲಿ ಸ್ಥಳಾಭಾವದ ಮೂಲಕ ಜನತೆಯ ವಾಸಕ್ಕೆ ಬಹಳ ಅನಾನುಕೂಲತೆಯಾಗುತಿರುವದರಿಂದ ಇದನ್ನು ಹೋಗಲಾಡಿಸುವ ಕುರಿತು ಮುಂಬಯಿ ಸರಕಾರದವರು ಉದ್ಯೋಗಸ್ಥರಿಗೆ ಮತ್ತು ಸಾಮಾನ್ಯ ನಾಗರಿಕರಿಗೆ ವಾಸಸ್ಥಳದ ಏರ್ಪಾಡು ಮಾಡುವದಕ್ಕಾಗಿ ವಸತಿಮಂಡಳವೊಂದನ್ನು ನಿಯಮಿಸಬೇಕೆಂದು ಗೊತ್ತುಪಡಿಸಿದ್ದಾರೆ. ಕೂಲಿಕಾರ ಮಂತ್ರಿಯ ಅಧ್ಯಕ್ಷತೆಯಲ್ಲಿ ಈ ಸಮಿತಿ ಸ್ಥಾಪಿತವಾದ ಬಳಿಕ ಪ್ರಾಂತದ ಬೇರೆ ಬೇರೆ ಭಾಗಗಳಿಗಾಗಿ ಪ್ರಾದೇಶಿಕ ಸಮಿತಿಗಳನ್ನು ನಿಯಮಿಸಬೇಕೆಂದು ಗೊತ್ತುಪಡಿಸಲಾಗಿದೆ.

ಬಡೋದೆ ಸಂಸ್ಥಾನದಲ್ಲಿ ಮಾರಾಟಕರ ನಿಷೇಧಾರ್ಥ ೮ ದಿನ ಸಂಪೂರ್ಣ ಹರತಾಳ ಆಚರಿಸಲ್ಪಟ್ಟು ೯ನೇ ತಾರೀಕಿನಿಂದ ಪೇಟೆ ಎಂದಿನಂತೆ ಸುರುವಾಗಿದೆ. ಸರಕಾರದವರು ಮಾರಾಟಕರದ ಕಾಯದೆಯಲ್ಲಿ ಕೆಲ ತಿದ್ದುಪಡಿ ಮಾಡಲೊಪ್ಪಿದ್ದರಿಂದ ಹರತಾಳವನ್ನು ಹಿಂತೆಗೆದುಕೊಳ್ಳಲಾಗಿದೆಯಂತೆ.

ಮುಂಬಯಿಗೆ ಅಮೇರಿಕೆಯಿಂದ ೮೫೦೦ ಟನ್ ಗೋದಿ ತುಂಬಿಕೊಂಡು ಹಡಗೊಂದು ಬಂದಿದೆ.

ಸಂಯುಕ್ತ ಮಹಾರಾಷ್ಟ್ರದ ಕಚ್ಚಾ ಯೋಜನೆ ಸಿದ್ಧಪಡಿಸಲು ಮಹಾರಾಷ್ಟ್ರ ಏಕೀಕರಣ ಸಮಿತಿಯವರು ತಜ್ಞರ ಸಮಿತಿಯೊಂದನ್ನು ಡಾ. ಜಯಕರರ ಅಧ್ಯಕ್ಷತೆಯಲ್ಲಿ ನೇಮಿಸಿರುವರು. ಅವರು ಪ್ರಾಸ್ತಾವಿಕ ಚರ್ಚೆ ಮಾಡಿ ಸ್ಥಳಿಕರೊಡನೆ ವಿಚಾರವಿನಿಮಯ ನಡೆಸಿರುವರು. ಮಧ್ಯಪ್ರಾಂತ ವರ್ಹಾಡಕ್ಕೂ ಹೋಗಿ ಅಲ್ಲಿನ ಜನರೊಡನೆ ವಿಚಾರವಿನಿಮಯ ನಡೆಸಲಿರುವರು.

## ಮದ್ರಾಸ

ಮದ್ರಾಸ ಸರಕಾರದ ಬೇರೆ ಬೇರೆ ಖಾತೆಗಳ ಪುನರ್ಘಟನೆ ಹಾಗು ಹೆಚ್ಚಿನ ನೋಕರರ ಸಂಖ್ಯೆ ಕಡಮೆ ಮಾಡುವ ಸಂಬಂಧದಲ್ಲಿ ಮಂತ್ರಿಮಂಡಳದವರು ಮಾನ್ಯ ಶ್ರೀ ಕಾರಂತರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ನೇಮಿಸಿದ್ದಾರೆ.

ಡಾ. ರಾಜೇಂದ್ರಪ್ರಸಾದರಿಗೆ ಕಾರ್ಯಬಾಹುಲ್ಯದ ಮೂಲಕ ದಕ್ಷಿಣ ಭಾರತದಲ್ಲಿಯ ಆಹಾರ ಪರಿಸ್ಥಿತಿ ಪರಿಶೀಲನೆಯ ಸಂಚಾರ ಕೈಕೊಳ್ಳುವದು ಸಾಧ್ಯವಾಗದ್ದರಿಂದ ಆಹಾರ ಖಾತೆಯ ಆ್ಯಡಿಶನಲ್ ಸೆಕ್ರೆಟರಿ ಶ್ರೀ ಬಿ ಆರ್ ಸೇನರು ಈ ಸಂಚಾರ ಕೈಕೊಂಡಿರುವರು.

ಮದ್ಯ ಪ್ರತಿಬಂಧ ಕಾಯದೆಯನ್ವಯ ೮ ನೇ ತಾರೀಕು ಮೊದಲನೆ ಸಾರೆ ಚಿತ್ತೂರ ಜಿಲ್ಹೆಯ ವೆಂಕಟರಮಣ ಎಂಬವರಿಗೆ ೬ ತಿಂಗಳ ಸಶ್ರಮ ಶಿಕ್ಷೆ ವಿಧಿಸಲಾಯಿತು. ಭಟ್ಟಿ ಸರಾಯಿ ತಯಾರಿಸಿದ ಆರೋಪ ಅವರ ಮೇಲಿತ್ತು.

ಪೆನಗೊಂಡಾದಲ್ಲಿ ಮುಸಲ್ಮಾನರ ಗೋರಿ ಬಳಿಯಲ್ಲಿ ಕಳೆದ ಶನಿವಾರ ದಿವಸ ಹಿಂದೂ ಮೆರವಣಿಗೆ ಮೇಲೆ ಕಲ್ಲುಗಳು ಬಿದ್ದು ಹೊಡೆದಾಟ ಸಂಭವಿಸಿದ್ದರಿಂದ ೪೦ ಜನ ಗಾಯಗೊಂಡಿರುವರು. ಪೋಲೀಸರು ಸಕಾಲಕ್ಕೆ ಅಲ್ಲಿಗೆ ಹೋಗಿ ಹುಸಿ ಗುಂಡು ಹಾರಿಸಿದ್ದರಿಂದ ಭಯಂಕರ ದೊಂಬಿಯಾಗುವದು ತಪ್ಪಿತು.

ಮದ್ರಾಸ ಪ್ರಾಂತದಲ್ಲಿ ಸರಕಾರದವರು ೧ ಕೋಟಿ ರೂಪಾಯಿ ವೆಚ್ಚದಿಂದ ಏಳು ಕೇಂದ್ರಗಳಲ್ಲಿ ಬಟ್ಟೆಯ ಸ್ವಾವಲಂಬನ ಯೋಜನೆ ಕೈಕೊಳ್ಳಲಿರುವರು. ಈ ಯೋಜನೆ ಜಾರಿಯಲ್ಲಿ ಬರಲಿದ್ದುದರಿಂದ ಹೊಸ ಗಿರಣಿ ಸ್ಥಾಪನೆಗೆ ಅಪ್ಪಣೆ ಕೊಡಬಾರದೆಂದು ಸರಕಾರದವರು ನಿರ್ಧರಿಸಿದ್ದಾರೆ. ಮಹಾತ್ಮಾರು ಈ ಯೋಜನೆಯನ್ನು ಹರಿಸಿದ್ದಾರೆ.

ಗಿರಣಿ ಬಟ್ಟೆಯ ಬದಲು ಖಾದಿಯನ್ನು ಎಲ್ಲರಿಗೂ ಒದಗಿಸುವ ವಿಚಾರ ಕಲ್ಪನಾ ಸಾಮ್ರಾಜ್ಯವಾಗಿದ್ದು ಮದ್ರಾಸ ಪ್ರಾಂತದಲ್ಲಿ ಕೇವಲ ಖಾದಿ ಬಟ್ಟೆ ಪೂರೈಸುವ ಮೋಹ ಬಿಟ್ಟುಗೊಟ್ಟು ಗಿರಣಿಗಳಿಗೆ ಪ್ರೋತ್ಸಾಹ ಕೊಡಬೇಕೆಂದು ಮುಂತಾಗಿ ಶ್ರೀ ರಾಮಮೂರ್ತಿಯವರು ಮದ್ರಾಸ ಸರಕಾರಕ್ಕೆ ಬಿನ್ನವಿಸಿಕೊಂಡಿದ್ದಾರೆ.

ಮದ್ರಾಸ ಪ್ರಾಂತದಲ್ಲಿಯ ದೇವದಾಸಿ ಪದ್ಧತಿಯನ್ನು ನಿಲ್ಲಿಸಿಬಿಡುವದಕ್ಕಾಗಿ ಮದ್ರಾಸ ಶಾಸನ ಸಭೆಯಲ್ಲಿ ಒಂದು ಮಸೂದೆ ಮಂಡಿಸಲಿರುವರು.

ಮದ್ರಾಸ ತ್ರಿಪ್ಲಿಕೇನ ಭಾಗದಲ್ಲಿಯ ಒಂದು ಪುಸ್ತಕದ ಅಂಗಡಿ ಝಡತಿ ಮಾಡಿ ಪೋಲೀಸರು ಕಲಕತ್ತೆಯ ದುರಂತ ಕಥೆ ಎಂಬ ತಮಿಳ ಪುಸ್ತಕಗಳನ್ನು ಜಪ್ತ ಮಾಡಿಕೊಂಡು ಹೋದರು.

ಕಾಲಿಕತ್ತದ ಕಾಂಗ್ರೆಸ ಕಾರ್ಯಕರ್ತರಾದ ಕುನ್ಹಿಕನ್ನನ್ ನಾಯರರನ್ನು ೬ ನೇ ತಾರೀಕು ಯಾರೋ ಇರಿದರು. ಅವರನ್ನು ಆಸ್ಪತ್ರೆಗೆ ಹಾಕಲಾಗಿದೆ.

ನೆಲ್ಲೂರಲ್ಲಿಯ ಪುರಾತನ ವೈಷ್ಣವ ದೇವಸ್ಥಾನವಾದ ಶ್ರೀ ವೇಣುಗೋಪಾಲಸ್ವಾಮಿ ದೇವಸ್ಥಾನವನ್ನು ಹರಿಜನರಿಗೆ ಮುಕ್ತ ಮಾಡಲಾಗಿದೆ.

ಮದ್ರಾಸದಿಂದ ಕಲಕತ್ತೆಗೆ ಹೊರಟ ಮೇಲಗಾಡಿಗೆ ಒಂಗೋಲೆ ಸ್ಟೇಶನ ಹತ್ತರ ಅಪಘಾತವಾಗಿ ೩೦ ಜನ ಮರಣ ಹೊಂದಿದ್ದಲ್ಲದೆ ೬೮ ಜನರಿಗೆ ಗಾಯ ಸಂಭವಿಸಿದೆ.

# ಸಾರ್ವಜನಿಕ ಪ್ರಕಟನೆ

ಧಾರವಾಡ ಜಿಲ್ಹೆಯ ಸೀದಾ ಕ್ಷೇತ್ರಗಳೊಳಗೆ ಶೆಜ್ಜಿ, ಸಾವಕ್ಕಿ, ನವಣಕ್ಕಿ, ಮತ್ತು ರಾಗಿ ಇವುಗಳ ಸೀದಾ ಜಾರಿಯಲ್ಲಿ ತರುವಿಕೆ.

ನಾಗರಿಕ ಪೂರೈಕೆ ಖಾತೆ,
ಮುಂಬಯಿ ಕೋಟೆ, ೭ನೇ ಸಪ್ಟೆಂಬರ ೧೯೪೬

### ಮುಂಬಯಿ ಸೀದಾ ಆಜ್ಞೆ, ೧೯೪೩

ನಂ. ೧೬೯ (೧೬)/ ಡಿ. ಆರ್ —೧೯೪೩ ನೇ ಮುಂಬಯಿ ಸೀದಾ ಆಜ್ಞೆಯ ೨ನೇ ಕಲಮಿನ (೭)ನೇ ಉಪಕಲಮಿನಿಂದ ದೊರೆತ ಅಧಿಕಾರಗಳನ್ನು ನಡಿಸಿ, ೧೦ ಜುಲೈ ೧೯೪೪ ನೇ ಸರಕಾರಿ ಪ್ರಕಟನೆ, ಹಣಕಾಸಿನ ಖಾತೆ (ಪೂರೈಕೆ), ನಂ. ೨೨೯ (೧೬)/ ಡಿ. ಆರ್., ಇದನ್ನು ಕೆಳಗಿನಂತೆ ತಿದ್ದುಪಡಿ ಮಾಡಿರುವದಾಗಿ ಮುಂಬಯಿ ಸರಕಾರದವರು ವಿಧಿಸುತ್ತಾರೆ. ಆ ತಿದ್ದುಪಡಿ ಏನಂದರೆ—

ಸದರ ಪ್ರಕಟನೆಯಲ್ಲಿಯ ಸಕ್ಕರೆಯ ಸಂಬಂಧ ಎಂಟ್ರಿಯ ತರುವಾಯ ಕೆಳಗಿನ ಎಂಟ್ರಿಗಳನ್ನು ಸೇರಿಸತಕ್ಕದ್ದು; ಆ ಎಂಟ್ರಿಗಳು ಯಾವವೆಂದರೆ:—

"ಶೆಜ್ಜಿ, ಶೆಜ್ಜಿ ಹಿಟ್ಟು ಸಹಿತ" "ಸಾವಕ್ಕಿ ಹಾಗೂ ಅದರ ಹಿಟ್ಟು"
"ನವಣಕ್ಕಿ ಹಾಗೂ ಅದರ ಹಿಟ್ಟು" "ರಾಗಿ ಮತ್ತು ರಾಗಿ ಹಿಟ್ಟು"

---

### ಮುಂಬಯಿ ಸೀದಾ ಆಜ್ಞೆ, ೧೯೪೩

ನಂ ೧೬೯ (೧೬) (ಅ)/ ಡಿ. ಆರ್.— ೧೯೪೩ನೇ ಇಸ್ವಿಯ ಮುಂಬಯಿ ಸೀದಾ ಆಜ್ಞೆಯ ೨ನೇ ಕಲಮಿನ (೮)ನೇ ಉಪಕಲಮಿನಿಂದ ದೊರೆತ ಅಧಿಕಾರಗಳನ್ನು ನಡಿಸಿ, ಇದಕ್ಕೆ ಜೋಡಿಸಿದ ಪರಿಶಿಷ್ಟದಲ್ಲಿ ನಿರ್ದಿಷ್ಟಪಡಿಸಿದ ಕ್ಷೇತ್ರಗಳ ಸಂಬಂಧಿ ೧೯೪೬ನೇ ಇಸ್ವಿ ಸಪ್ಟೆಂಬರ ತಿಂಗಳದ ೧ನೇ ತಾರೀಖನ್ನು ಶೆಜ್ಜಿ ಮತ್ತು ಶೆಜ್ಜಿ ಹಿಟ್ಟು, ಸಾವಕ್ಕಿ ಮತ್ತು ಅದರ ಹಿಟ್ಟು, ನವಣಕ್ಕಿ ಮತ್ತು ಅದರ ಹಿಟ್ಟು, ರಾಗಿ ಮತ್ತು ರಾಗಿ ಹಿಟ್ಟು, ಇವುಗಳ ಸೀದಾ ಪ್ರಾರಂಭದ ದಿನವೆಂದು ಮುಂಬೈ ಸರಕಾರದವರು ಗೊತ್ತುಪಡಿಸಿರುತ್ತಾರೆ.

#### ಪರಿಶಿಷ್ಟ

೧. ಧಾರವಾಡ ಮುನಸಿಪಲ್ ಬರೊ, ಸದರ ಮುನಸಿಪಲ್ ಬರೋದ ಹೊರಗಿನ ಧಾರವಾಡ ಗ್ರಾಮದ ಕ್ಷೇತ್ರ, ಧಾರವಾಡ ಒಕ್ಕಲತನ ಫಾರ್ಮ ಮತ್ತು ಧಾರವಾಡ ತಾಲೂಕಿನೊಳಗಿನ ಕೆಳಗಿನ ಹಳ್ಳಿಗಳ ಮುಲ್ಕಿ ಸೀಮೆಗಳು:—
(೧) ಹೊಸಯಲ್ಲಾಪುರ (೨) ಲಕಮನಹಳ್ಳಿ (೩) ಸಪ್ತಾಪುರ, (೪) ದೊಡ್ಡನಾಯಿಕನಕೊಪ್ಪ (೫) ಸೈದಾಪುರ (೬) ಮಾಳಾಪುರ (೭) ಕಮಲಾಪುರ (೮) ಗುಲಗಂಜಿಕೊಪ್ಪ (೯) ನಾರಾಯಣಪುರ (೧೦) ಅತ್ತಿಕೊಳ್ಳ (೧೧) ಕೆಲಗೇರಿ (ರೆವ್ಹಿನ್ಯೂ ಸರ್ವೆ ನಂ. ೩೮೮)
೨. ಗದಗ-ಬೆಟಗೇರಿ ಮುನಿಸಿಪಲ್ ಬರೋ.
೩. ಹಾವೇರಿ ಮುನಸಿಪಲ್ ಹದ್ದು.
೪. ರಾಣೇಬಿನ್ನೂರ ಮುನಸಿಪಲ್ ಹದ್ದು.

---

### ಮುಂಬಯಿ ಸೀದಾ ಆಜ್ಞೆ, ೧೯೪೩

ನಂ ೧೬೯ (೧೬) (ಅ):— ೧೯೪೩ ನೇ ಮುಂಬಯಿ ಸೀದಾ ಆಜ್ಞೆಯ ೨ ನೇ ಕಲಮಿನ (೭) ನೇ ಉಪಕಮಿನಿಂದ ದೊರೆತ ಅಧಿಕಾರಗಳನ್ನು ನಡಿಸಿ, ೧೫ ಮಾರ್ಚ ೧೯೪೬ ನೇ ಸರಕಾರೀ ಪ್ರಕಟನೆ, ಹಣಕಾಸಿನ ಖಾತೆ (ಪೂರೈಕೆ), ನಂ. ೨೨೯ (೧೬) ನ್ನು ಕೆಳಗಿನಂತೆ ತಿದ್ದುಪಡಿ ಮಾಡಿರುವಾಗಿ ಮುಂಬಯಿ ಸರಕಾರದವರು ವಿಧಿಸುತ್ತಾರೆ. ಆ ತಿದ್ದುಪಡಿ ಏನೆಂದರೆ:—

ಸದರ ಪ್ರಕಟನೆಯಲ್ಲಿಯ ಸಕ್ಕರೆಯ ಸಂಬಂಧದ ಎಂಟ್ರಿಯ ತರುವಾಯ ಕೆಳಗಿನ ಎಂಟ್ರಿಗಳನ್ನು ಸೇರಿಸತಕ್ಕದ್ದು; ಅವು ಯಾವವೆಂದರೆ:—

"೫. ಶೆಜ್ಜಿ ಹಾಗೂ ಶೆಜ್ಜಿ ಹಿಟ್ಟು" "೬. ಸಾವಕ್ಕಿ ಹಾಗೂ ಸಾವಕ್ಕಿ ಹಿಟ್ಟು"
"೭. ನವಣಕ್ಕಿ ಹಾಗೂ ನವಣಕ್ಕಿ ಹಿಟ್ಟು" "೮. ರಾಗಿ ಮತ್ತು ರಾಗಿ ಹಿಟ್ಟು"

---

### ಮುಂಬಯಿ ಸೀದಾ ಆಜ್ಞೆ, ೧೯೪೩

ನಂ ೧೬೯ (೧೬) (ಅ) (ಅ):— ೧೯೪೩ ನೇ ಮುಂಬಯಿ ಸೀದಾ ಆಜ್ಞೆಯ ೨ನೇ ಕಲಮಿನ (೮) ನೇ ಉಪಕಲಮಿನಿಂದ ದೊರೆತ ಅಧಿಕಾರಗಳನ್ನು ನಡಿಸಿ, ಇದಕ್ಕೆ ಜೋಡಿಸಿದ ಪರಿಶಿಷ್ಟದಲ್ಲಿ ನಿರ್ದಿಷ್ಟ ಪಡಿಸಿದ ಕ್ಷೇತ್ರಗಳ ಸಂಬಂಧಿ ೧೯೪೬ ನೇ ಇಸ್ವಿಯ ಸಪ್ಟೆಂಬರ ತಿಂಗಳದ ಮೊದಲನೇ ದಿನವನ್ನು ಶೆಜ್ಜಿ ಮತ್ತು ಶೆಜ್ಜಿ ಹಿಟ್ಟು, ಸಾವಕ್ಕಿ ಮತ್ತು ಸಾವಕ್ಕಿ ಹಿಟ್ಟು, ನವಣಕ್ಕಿ ಮತ್ತು ನವಣಕ್ಕಿ ಹಿಟ್ಟು ಹಾಗೂ ರಾಗಿ ಮತ್ತು ರಾಗಿ ಹಿಟ್ಟು ಇವುಗಳ ಸೀದಾ ಪ್ರಾರಂಭದ ದಿನವೆಂದು ಮುಂಬಯಿ ಸರಕಾರದವರು ಗೊತ್ತುಪಡಿಸಿರುತ್ತಾರೆ.

#### ಪರಿಶಿಷ್ಟ

೧. ಹುಬ್ಬಳ್ಳಿ ಮುನಸಿಪಲ್ ಬರೋ.

೨. ಹುಬ್ಬಳ್ಳಿ ಮುನಸಿಪಲ್ ಬರೋದ ಹೊರಗಿನ ನಾಯವ್ಯಕ್ಕೆ ನಾಗಶೆಟ್ಟಿಕೊಪ್ಪ ಗ್ರಾಮದ ಸರ್ವೆ ನಂ. ೬೭, ೭೭, ೭೯ ಮತ್ತು ೮೦ ಹಾಗೂ ಉತ್ತರಕ್ಕೆ ಬೆಂಗೇರಿ ಗ್ರಾಮದ ಸರ್ವೆ ನಂ. ೧೩೭-ಅ, ೧೩೮, ೧೩೯ ಮತ್ತು ೧೪೦ ಉಳ್ಳ ನಾಗಶೆಟ್ಟಿಕೊಪ್ಪ ಗ್ರಾಮದ ಭಾಗವನ್ನೊಳಗೊಂಡ ಕ್ಷೇತ್ರ.

೩. ಬೆಂಗೇರಿ ಗ್ರಾಮದ ಸರ್ವೆ ನಂಬರಗಳು ೧೧೩ ರಿಂದ ೧೧೮ ಒಳಗೊಂಡ ಕ್ಷೇತ್ರ.

೪. ಹುಬ್ಬಳ್ಳಿ ಮುನಸಿಪಲ್ ಬರೋದ ಹೊರಗಿನ ಮತ್ತು ಪೂರ್ವಕ್ಕೆ ಕೇಶವಾಪೂರ ಗ್ರಾಮದ ಸರ್ವೆ ನಂ. ೨೮, ೨೯, ೬೮—ಅ, ಮತ್ತು ೬೯ ಉಳ್ಳ ಕೇಶವಾಪೂರ, ಗ್ರಾಮದ ಭಾಗವನ್ನೊಳಗೊಂಡ ಕ್ಷೇತ್ರ.

೫. ಪೂರ್ವಕ್ಕೆ ಮದಿನಾಯಕನ ಅರಳಿಕಟ್ಟಿ ಗ್ರಾಮದ ಸರ್ವೆ ನಂ. ೬೮, ೯೦, ಮತ್ತು ೯೧ ಉಳ್ಳ ಹುಬ್ಬಳ್ಳಿ ಮುನಸಿಪಲ್ ಬರೋದ ಹೊರಗಿನ ಮದಿನಾಯಕನ ಅರಳಿಕಟ್ಟಿಯ ಭಾಗವನ್ನೊಳಗೊಂಡ ಕ್ಷೇತ್ರ.

೬. ಬಮ್ಮಾಪೂರ ಗ್ರಾಮದ ಸರ್ವೆ ನಂ. ೫ ಮತ್ತು ೬ ಒಳಗೊಂಡ ಕ್ಷೇತ್ರ.

ಭಾರತ ಸಂರಕ್ಷಣ ಕಾಯದೆಯ ೧೧೯ ನೇ ನಿಯಮದ (೧) ನೇ ಉಪನಿಯಮವನ್ನನುಸರಿಸಿ ಮೇಲಿನ ಆಜ್ಞೆಗಳ ಪ್ರಕಟನೆಯನ್ನು ಕೆಳಗಿನಂತೆ ಪ್ರಸಿದ್ಧಿಸತಕ್ಕದ್ದೆಂದು ಮುಂಬಯಿ ಸರಕಾರದವರು ನಿರ್ದೇಶಿಸುತ್ತಾರೆ:—

(ಅ) ಮುಂಬಯಿ ಸರಕಾರದ ಗ್ಯಾಝೆಟದಲ್ಲಿ ಅದನ್ನು ಪ್ರಸಿದ್ಧಿಸಿ.
(ಬ) ಅವುಗಳ ಹೇಳಿಕೆಗಳನ್ನು ವಿವರಿಸುವ ಪತ್ರಿಕಾ—ಸೂಚನೆಯನ್ನು ಹೊರಡಿಸಿ.
(ಕ) ಕೆಳಗಿನ ಪತ್ರಿಕೆಗಳಲ್ಲಿ ಅದನ್ನು ಪ್ರಸಿದ್ಧಿಸಿ:—
೧. ಸಂಯುಕ್ತ—ಕರ್ನಾಟಕ, ಹುಬ್ಬಳ್ಳಿ.
೨. ಕರ್ನಾಟಕ ಬಂಧು, ಗದಗ.
೩. ಕರ್ಮವೀರ, ಹುಬ್ಬಳ್ಳಿ.
(ಡ) ಆಜ್ಞೆಗಳು ಅನ್ವಯಿಸುವ ಕ್ಷೇತ್ರಗಳಲ್ಲಿಯ ಸ್ಥಳಿಕ ಸರಕಾರೀ ಕಚೇರಿಗಳ ನೋಟೀಸ ಬೋರ್ಡುಗಳಿಗೆ ಅದರ ಪ್ರತಿಗಳನ್ನು ಅಂಟಿಸಿ.

ಮುಂಬಯಿ ಸರಕಾರದ ಆಜ್ಞೆಯ ಪ್ರಕಾರ
**ಡಿ. ಎಸ್. ಬಖಲೆ,**
ಜೊತೆ ಕಾರ್ಯದರ್ಶಿ

## ಹೊಸದಿಲ್ಲಿ

ಅಖಿಲ ಭಾರತ ರೇಲ್ವೆ ಜನರ ಮಹಾಮಂಡಳದ ಸಾಧಾರಣ ಸಭೆ ಹೊಸದಿಲ್ಲಿಯಲ್ಲಿ ಅಕ್ಟೋಬರ ೨೬ ಕ್ಕೆ ಕೂಡುವದು.

ಎಸ್ ಆಯ ರೇಲ್ವೆ ಕಂಪಿನ ಒಡಂಬಡಿಕೆ ಸಂಬಂಧದಲ್ಲಿ ರೇಲ್ವೆ ಮಂತ್ರಿಗಳಾದ ಅಸಫಅಲ್ಲಿಯವರನ್ನು ಕಾಣಲು ಗುರುಸ್ವಾಮಿಯವರು ದಿಲ್ಲಿಗೆ ಹೋಗಿರುವರು.

ಡ್ಯಾ. ಅಸಫಅಲ್ಲಿಯವರು ನಡುಗಾಲ ಸರಕಾರದ ಸದಸ್ಯರಾದ್ದರಿಂದ ತೆರವು ಬಿದ್ದ ಕೇಂದ್ರ ಶಾಸನಸಭೆಯ ಸ್ಥಳಕ್ಕೆ ಕಾಂಗ್ರೆಸ್ಸಿನ ಶ್ರೀ ದೇಶಬಂಧು ಗುಪ್ತರೊಬ್ಬರೇ ನಾಮಪತ್ರ ಕೊಟ್ಟದ್ದರಿಂದ ಅವರು ಆರಿಸಿ ಬಂದಿರುವರು.

ಲೀಗ ಕ್ರಿಯಾ ಸಮಿತಿಯ ಖಾಜಾ ನಾಜೀಮುದ್ದೀನ ಮಮತಾಜ ದೌಲತಾನಾ ಮತ್ತು ಅಬ್ದುರ್ ರಾಬ ನಿಶಿತಾರರು ೪ ನೇ ತಾರೀಕು ಮುಂಜಾನೆ ದಿಲ್ಲಿಯಿಂದ ೧೨ ಮೈಲುಗಳ ಮೇಲೆ ಮೋಟರ ಅಪಘಾತಕ್ಕೆ ಸಿಲುಕಿ ಗಾಯಗೊಂಡರು. ಖಾಜಾ ನಾಜೀಮುದ್ದೀನರ ಮುಖ ಹಾಗು ತೋಳಿಗೆ ಭಯಂಕರ ಗಾಯಗಳಾಗಿವೆ. ದೌಲತಾನಾರವರ ತಲೆಗೆ ಸ್ವಲ್ಪ ಪೆಟ್ಟು ಬಿದ್ದಿದೆ. ನಿಶಿತಾರರು ಮಾತ್ರ ಗಾಯಹೊಂದದೆ ಪಾರಾಗಿರುವರು.

ಸಂಗ್ರಹ ಮತ್ತು ಲಾಭಬಡಕತನ ಪ್ರತಿಬಂಧಕ ಅರ್ಡಿನನ್ಸ ಮತ್ತು ನಿತ್ಯೋಪಯೋಗಿ ವಸ್ತುಗಳ ವಿತರಣ ಹುಕುಮಿನ ಅವಧಿ ಈಗ ಮುಗಿದದ್ದು ಕೇಂದ್ರ ಸರಕಾರದವರು ಪ್ರಕಟನೆ ಹೊರಡಿಸಿ ಅವನ್ನು ರದ್ದುಪಡಿಸಿರುವರು.

## ಯುಕ್ತಪ್ರಾಂತ

ಅ. ಭಾ. ಕಾಂಗ್ರೆಸ ಸಮಿತಿಯ ಕಚೇರಿಯಲ್ಲಿ ಮಧ್ಯಪೂರ್ವ ಖಾತೆಯೊಂದನ್ನು ಪ್ರಾರಂಭಿಸಲಾಗಿದೆ. ಇಜಿಪ್ತ ಇರಾಣ ಮೊದಲಾದ ಮಧ್ಯಪೂರ್ವ ದೇಶಗಳಲ್ಲಿಯ ಭಾಷೆಗಳ ಮೂಲಕ ಕಾಂಗ್ರೆಸ ಚಟುವಟಿಕೆಗಳ ಪ್ರಚಾರ ಮಾಡುವದೇ ಈ ಖಾತೆಯ ಕೆಲಸ.

ಕಾಂಗ್ರೆಸ ಅಧ್ಯಕ್ಷ ಪದಕ್ಕೆ ಆಚಾರ್ಯ ಕೃಪಲಾಣಿ ಮತ್ತು ಮೌಲಾನಾ ಅಬುಲ್‌ಕಲಂ ಅಜಾದ ಇವರಿಬ್ಬರ ಹೆಸರು ಸೂಚಿಸಲ್ಪಟ್ಟದ್ದು ೧೦ ದಿನಗಳೊಳಗಾಗಿ ಯಾರಾದರೊಬ್ಬರು ಹಿಂತೆಗೆದುಕೊಳ್ಳದಿದ್ದರೆ ಚುನಾವಣೆ ನಡೆಯುವದು.

ನಮ್ಮ ವಿನಂತಿಗಳನ್ನು ಪೋರ್ಚುಗೀಜ ಸರಕಾರ ಮನ್ನಿಸದಿದ್ದರೆ, ನಮ್ಮ ಧುರೀಣರನ್ನು ಕೆಟ್ಟ ರೀತಿಯಿಂದ ನಡೆಸಿಕೊಳ್ಳುತ್ತಿರುವದನ್ನು ಪ್ರತಿಭಟಿಸುವದಕ್ಕಾಗಿ ಅವರನ್ನು ಆರ್ಥಿಕ ಬಲಪ್ರಯೋಗಕ್ಕೆ ಗುರಿಪಡಿಸಬೇಕು ಎಂದು ಸಂಯುಕ್ತಪ್ರಾಂತದ ಶಿಕ್ಷಣ ಮಂತ್ರಿಗಳಾದ ಸ್ವಾಮಿ ಸಂಪೂರ್ಣಾನಂದರು ಅಭಿಪ್ರಾಯಪಟ್ಟಿದ್ದಾರೆ.

ಮಿರತದಲ್ಲಿ ಕೂಡಲಿರುವ ಕಾಂಗ್ರೆಸಿಗೆ ೨೫ ಲಕ್ಷ ರೂಪಾಯಿ ವೆಚ್ಚ ಬರಬಹುದೆಂದು ಅಂದಾಜ ಮಾಡಲಾಗಿದೆ. ಈ ಹಣವನ್ನು ಸ್ವಾಗತ ಸಮಿತಿ ಸದಸ್ಯರನ್ನು ಮಾಡಿಕೊಂಡು ಮತ್ತು ಸರ್ವಸಾಧಾರಣ ಪ್ರವೇಶ ತಿಕೀಟು ಮಾರಿ ಕೂಡಿಸಬೇಕೆಂದು ಗೊತ್ತುಪಡಿಸಲಾಗಿದೆ.

ಅಲೀಗಡ ಮುಸಲ್ಮಾನ ಜನತೆ ಮತ್ತು ವಿಶ್ವವಿದ್ಯಾಲಯ ವರ್ಗದ ಮೇಲೆ ಸಂಯುಕ್ತಪ್ರಾಂತ ಸರಕಾರದವರು ೧೭೫ ಸಾವಿರ ರೂಪಾಯಿ ಸಾಮೂಹಿಕ ದಂಡ ವಿಧಿಸಿದ್ದಾರೆ. ಕಳೆದ ಮಾರ್ಚದಲ್ಲಿ ನಡೆದ ಗಲಭೆಗಳೇ ಇದಕ್ಕೆ ಕಾರಣ. ರಾಷ್ಟ್ರೀಯ ಮುಸಲ್ಮಾನರನ್ನು ಈ ಸಾಮೂಹಿಕ ದಂಡದಿಂದ ಹೊರಪಡಿಸಲಾಗುವದು.

## ಮಧ್ಯಪ್ರಾಂತ

ಅಕ್ಟೋಬರ ೧೯ ನೇ ತಾರೀಕಿನೊಳಗಾಗಿ ತಮ್ಮ ಸಂಬಳ ತುಟ್ಟಿಭತ್ತೆಗಳನ್ನು ಹೆಚ್ಚಿಸದಿದ್ದರೆ ತಾವು ಸಂಪು ಹೂಡುವದಾಗಿ ಜಬಲಪುರದ ವಿದ್ಯುದಾಲಯದ ೨೫೦೦೦ ಕೆಲಸಗಾರರು ತಿಳಿಸಿದ್ದಾರೆ.

ಜಬಲಪುರದಿಂದ ೧೨ ಮೈಲು ದೂರದಲ್ಲಿದ್ದ ಸೌಗುರದಲ್ಲಿ ಜಾತೀಯ ಗಲಭೆ ಸಂಭವಿಸಿ ೪ ಜನರು ಮರಣ ಹೊಂದಿ ಅನೇಕರು ಗಾಯಗೊಂಡರು. ಜಿಲ್ಹಾ ಮ್ಯಾಜಿಸ್ಟ್ರೇಟರು ೧೪೪ ಕಲಮು ಜಾರಿ ಮಾಡಿ ಲಾಠಿ ಮೊದಲಾದ ಆಯುಧಗಳನ್ನು ಹಿಡಿಯಲು ನಿರ್ಬಂಧಿಸಿದ್ದಾರೆ.

## ಸರಹದ್ದ

ಪಂಡಿತ ಜವಾಹರಲಾಲರು ಈ ತಿಂಗಳ ಮಧ್ಯದಲ್ಲಿ ಸರಹದ್ದ ಪ್ರಾಂತದ ಮತ್ತು ಗುಡ್ಡಗಾಡು ಭಾಗದ ಸಂಚಾರ ಕೈಕೊಳ್ಳಲಿರುವರು. ಆಗ ಅವರಿಗೆ ಹಾರ್ದಿಕ ಸ್ವಾಗತ ಕೊಡಬೇಕೆಂದು ಸರಹದ್ದದವರು ನಿರ್ಧರಿಸಿದ್ದಾರೆ. ಗವರ್ನರರೂ ಜವಾಹರಲಾಲರನ್ನು ಕಂಡು ಈ ಪ್ರವಾಸದ ವ್ಯವಸ್ಥೆ ಬಗ್ಗೆ ಚರ್ಚಿಸಲು ದಿಲ್ಲಿಗೆ ಹೋಗಿ ಬಂದರು.

## ಬಿಹಾರ

ಬಿಹಾರದ ಕೆಲ ಉಪಮಂತ್ರಿಗಳು ಯಾವತ್ತೂ ಪ್ರಾಂತಗಳ ಉಪಮಂತ್ರಿಗಳ ಪರಿಷತ್ತನ್ನು ಕೂಡಿಸುವ ಯೋಚನೆ ನಡೆಸಿದ್ದಾರೆ. ಉಪಮಂತ್ರಿಗಳ ಕಾರ್ಯ ಅಧಿಕಾರ ದೈನಂದಿನ ಆಡಳಿತೆಯಲ್ಲಿ ಅವರ ಕರ್ತವ್ಯವನ್ನು ಕುರಿತು ಚರ್ಚಿಸುವದೇ ಈ ಪರಿಷತ್ತಿನ ಉದ್ದೇಶವಾಗಿದೆ.

ಚಿವಡಾ ಮೊಂಘೀರದಲ್ಲಿ ಮೂರ್ತಿವಿಸರ್ಜನ ಮಾಡಿ ಮರಳುತಿದ್ದ ಜನತೆಯ ಮೇಲೆ ಹಲವರು ಏರಿಬಿದ್ದುದರಿಂದ ಇಟ್ಟಂಗಿಗಳ ಹೊಡೆದಾಟ ನಡೆಯಿತು. ಪೋಲೀಸರು ಆ ಸ್ಥಳಕ್ಕೆ ಹೋಗಿ ಗುಂಡು ಹಾರಿಸಿದ್ದರಿಂದ ಒಬ್ಬನು ಮರಣ ಹೊಂದಿದ್ದು ಮತ್ತೊಬ್ಬನಿಗೆ ಗಾಯವಾಯಿತು.

## ಸಿಂಧ

ಸಿಂಧ ಶಾಸನ ಸಭೆಯ ಚುನಾವಣೆಗಳಲ್ಲಿ ಸರಕಾರಿ ಅಧಿಕಾರಿಗಳು ಹಸ್ತಕ್ಷೇಪ ಮಾಡುತ್ತಿರುವದರಿಂದ ಚುನಾವಣೆಗಳು ನಿಷ್ಪಕ್ಷಪಾತ ರೀತಿಯಿಂದ ನಡೆಯಲಾರವು. ಆದುದರಿಂದ ಪಾರ್ಲಮೆಂಟಿನ ಇಬ್ಬರು ಸದಸ್ಯರನ್ನು ಕಳಿಸಬೇಕೆಂದು ಮುಂತಾಗಿ ಶ್ರೀ ಜಿ ಎಂ ಸಯ್ಯದರು ಭಾರತ ಮಂತ್ರಿಗಳಿಗೆ ತಂತಿ ಕಳಿಸಿರುವರು.

ಹಿಂದುಸ್ತಾನದಲ್ಲಿ ನಡೆದ ಜಾತೀಯ ಗಲಭೆಗಳಿಗೆಲ್ಲ ಬ್ರಿಟಿಲ್ ಭೇದನೀತಿಯೆ ಕಾರಣವೆಂದು ಸಿಂಧದ ಮುಖ್ಯ ಕಾರ್ಯಕರ್ತರಾದ ಶ್ರೀ ಆರ್ ಕೆ ಸಿಧ್ವಾ ಇವರು ಅಭಿಪ್ರಾಯ ಪಟ್ಟಿದ್ದಾರೆ.

---

# ಸಾರ್ವಜನಿಕ ಪ್ರಕಟನೆ

ಧಾರವಾಡ ಜಿಲ್ಹೆಯ ಸೀದಾ ಕ್ಷೇತ್ರಗಳೊಳಗೆ ಗೋವಿನಜೋಳದ ಸೀದಾ ಜಾರಿಯಲ್ಲಿ ತರುವಿಕೆ

ನಾಗರಿಕ ಪೂರೈಕೆ ಖಾತೆ,

ಮುಂಬಯಿಕೋಟಿ, ೧೧ ನೇ ಸಪ್ಟೆಂಬರ ೧೯೪೬

ನಂ. ೧೬೯ (೧೬) / ಡಿ. ಆರ್.—೧೯೪೩ ನೇ ಮುಂಬಯಿ ಸೀದಾ ಆಜ್ಞೆಯ ೨ನೇ ಕಲಮಿನ (೭) ನೇ ಉಪಕಲಮಿನಿಂದ ದೊರೆತ ಅಧಿಕಾರಗಳನ್ನು ನಡಿಸಿ, ೧೫ ಮಾರ್ಚ ೧೯೪೪ ನೇ ಸರಕಾರೀ ಪ್ರಕಟನೆ, ಹಣಕಾಸಿನ ಖಾತೆಯ (ಪೂರೈಕೆ), ನಂ. ೨೨೯ (೧೬) ನ್ನು ಕೆಳಗಿನಂತೆ ತಿದ್ದುಪಡಿ ಮಾಡಿರುವದಾಗಿ ಮುಂಬಯಿ ಸರಕಾರದವರು ವಿಧಿಸುತ್ತಾರೆ. ಆ ತಿದ್ದುಪಡಿ ಏನಂದರೆ:—

ಆ ಪ್ರಕಟನೆಯಲ್ಲಿಯ ರಾಗಿಯ ಸಂಬಂಧದ ಎಂಟ್ರಿಯ ತರುವಾಯ ಕೆಳಗಿನ ಎಂಟ್ರಿಯನ್ನು ಸೇರಿಸತಕ್ಕದ್ದು; ಆ ಎಂಟ್ರಿಯು ಯಾವುದೆಂದರೆ:—

"ಗೋವಿನಜೋಳ ಹಾಗೂ ಅದರ ಹಿಟ್ಟು, ಸಜ್ಜಿಗಿ, ರವಾ, ಮೈದಾ ಮತ್ತು ಅಟಾ ಆದರೆ ಗೋವಿನ ಜೋಳದ ಹಸರು ತೆನೆಗಳನ್ನು ಬಿಟ್ಟು"

### ಮುಂಬಯಿ ಸೀದಾ ಆಜ್ಞೆ, ೧೯೪೩

ನಂ. ೧೬೯ (೧೬) (ಅ)/ ಡಿ ಆರ್.—೧೯೪೩ ನೇ ಮುಂಬಯಿ ಸೀದಾ ಆಜ್ಞೆಯ ೨ನೇ ಕಲಮಿನ (೮) ನೇ ಉಪಕಲಮಿನಿಂದ ದೊರೆತ ಅಧಿಕಾರಗಳನ್ನು ನಡಿಸಿ, ಇದಕ್ಕೆ ಜೋಡಿಸಿದ ಪರಿಶಿಷ್ಟದಲ್ಲಿ ನಿರ್ದಿಷ್ಟಪಡಿಸಿದ ಕ್ಷೇತ್ರಗಳ ಸಂಬಂಧಿ ಗೋವಿನಜೋಳದ ಹಸರು ತೆನೆಗಳನ್ನು ಬಿಟ್ಟು ಗೋವಿನಜೋಳ, ಅದರಹಿಟ್ಟು, ಸಜ್ಜಿಗಿ, ರವಾ, ಮೈದಾ ಮತ್ತು ಆಟಾ ಇವುಗಳ ಸೀದಾ ಪ್ರಾರಂಭದ ದಿನವು ೧೯೪೬ ನೇ ಇಸ್ವಿಯ ಸಪ್ಟೆಂಬರ ೮ ನೇ ತಾರೀಖು ಎಂದು ಮುಂಬಯಿ ಸರಕಾರದವರು ಗೊತ್ತುಪಡಿಸಿರುತ್ತಾರೆ.

### ಪರಿಶಿಷ್ಟ

೧. ಹುಬ್ಬಳ್ಳಿ ಮುನಸಿಪಲ್ ಬರೋ.

೨. ಹುಬ್ಬಳ್ಳಿ ಮುನಸಿಪಲ್ ಬರೋದ ಹೊರಗಿನ ವಾಯವ್ಯಕ್ಕೆ ನಾಗಶೆಟ್ಟಿಕೊಪ್ಪ ಗ್ರಾಮದ ಸರ್ವೆ ನಂ. ೬೭, ೭೭, ೭೯ ಮತ್ತು ೮೦ ಹಾಗೂ ಉತ್ತರಕ್ಕೆ ಬೆಂಗೇರಿ ಗ್ರಾಮದ ಸರ್ವೆ ನಂ. ೧೩೭-ಅ, ೧೩೮, ೧೩೯ ಮತ್ತು ೧೪೦ ಉಳ್ಳ ನಾಗಶೆಟ್ಟಿಕೊಪ್ಪ ಗ್ರಾಮದ ಭಾಗವನ್ನೊಳಗೊಂಡ ಕ್ಷೇತ್ರ.

೩. ಬೆಂಗೇರಿ ಗ್ರಾಮದ ಸರ್ವೆ ನಂಬರಗಳು ೧೧೩ ರಿಂದ ೧೧೮ ಹಾಗೂ ೧೪೦ ಒಳಗೊಂಡ ಕ್ಷೇತ್ರ.

೪. ಹುಬ್ಬಳ್ಳಿ ಮುನಸೀಪಲ್ ಬರೋದ ಹೊರಗಿನ ಮತ್ತು ಪೂರ್ವಕ್ಕೆ ಕೇಶವಾಪೂರ ಗ್ರಾಮದ ಸರ್ವೆ ನಂ. ೨೮, ೨೯, ೬೮—ಅ, ಮತ್ತು ೬೯ ಉಳ್ಳ ಕೇಶವಾಪೂರ ಗ್ರಾಮದ ಭಾಗವನ್ನೊಳಗೊಂಡ ಕ್ಷೇತ್ರ.

೫. ಪೂರ್ವಕ್ಕೆ ಮದಿನಾಯಕನ ಅರಳಿಕಟ್ಟಿ ಗ್ರಾಮದ ಸರ್ವೆ ನಂ. ೬೮, ೯೦, ಮತ್ತು ೯೪ ಉಳ್ಳ ಹುಬ್ಬಳ್ಳಿ ಮುನಸೀಪಲ್ ಬರೋದ ಹೊರಗಿನ ಮದಿನಾಯಕನ ಅರಳಿಕಟ್ಟಿಯ ಭಾಗವನ್ನೊಳಗೊಂಡ ಕ್ಷೇತ್ರ.

೬. ಬಮ್ಮಾಪೂರ ಗ್ರಾಮದ ಸರ್ವೆ ನಂ. ೫ ಮತ್ತು ೬ ಒಳಗೊಂಡ ಕ್ಷೇತ್ರ.

---

ನಂ ೧೬೯ (೧೬) (ಬ) ಡಿ. ಆರ್—೧೯೪೩ ನೇ ಮುಂಬಯಿ ಸೀದಾ ಆಜ್ಞೆಯ ೨ ನೇ ಕಲಮಿನ (೭) ನೇ ಉಪಕಲಮಿನಿಂದ ದೊರೆತ ಅಧಿಕಾರಗಳನ್ನು ನಡಿಸಿ, ೧೦ ಜುಲೈ ೧೯೪೪ ನೇ ಸರಕಾರೀ ಪ್ರಕಟನೆ, ಹಣಕಾಸಿನಖಾತೆ (ಪೂರೈಕೆ), ನಂ. ೨೨೯ (೧೬) / ಡಿ. ಆರ್. ನ್ನು ಮುಂಬಯಿ ಸರಕಾರದವರು ಕೆಳಗಿನಂತೆ ತಿದ್ದುಪಡಿ ಮಾಡಿರುತ್ತಾರೆ. ಆ ತಿದ್ದುಪಡಿ ಏನೆಂದರೆ—.

ಆ ಪ್ರಕಟನೆಯಲ್ಲಿಯ ರಾಗಿಯ ಸಂಬಂಧದ ಎಂಟ್ರಿಯ ನಂತರ ಕೆಳಗಿನ ಎಂಟ್ರಿಯನ್ನು ಸೇರಿಸತಕ್ಕದ್ದು. ಆ ಎಂಟ್ರಿಯು ಯಾವುದೆಂದರೆ—

"ಗೋವಿನಜೋಳದ ಹಸರು ತೆನೆಗಳನ್ನು ಬಿಟ್ಟು, ಗೋವಿನಜೋಳ, ಅದರ ಹಿಟ್ಟು, ಸಜ್ಜಿಗಿ, ರವಾ, ಮೈದಾ ಮತ್ತು ಅಟಾ."

### ಮುಂಬಯಿ ಸೀದಾ ಆಜ್ಞೆ, ೧೯೪೩.

ನಂ. ೧೬೯[೧೬] [ಕ] ಡಿ. ಆರ್.—೧೯೪೩ ನೇ ಮುಂಬಯಿ ಸೀದಾ ಆಜ್ಞೆಯ ೨ ನೇ ಕಲಮಿನ (೮) ನೇ ಉಪಕಲಮಿನಿಂದ ದೊರೆತ ಅಧಿಕಾರಗಳನ್ನು ನಡಿಸಿ ಇದಕ್ಕೆ ಜೋಡಿಸಿದ ಪರಿಶಿಷ್ಟದಲ್ಲಿ ನಿರ್ದಿಷ್ಟಪಡಿಸಿದ ಕ್ಷೇತ್ರಗಳಲ್ಲಿ ಗೋವಿನಜೋಳದ ಹಸರು ತೆನೆಗಳನ್ನು ಬಿಟ್ಟು ಗೋವಿನಜೋಳ, ಅದರಹಿಟ್ಟು, ಸಜ್ಜಿಗಿ, ರವಾ, ಮೈದಾ ಮತ್ತು ಅಟಾ ಇವುಗಳ ಸೀದಾ ಪ್ರಾರಂಭ ದಿನವೆಂದು ೧೯೪೬ ನೇ ಇಸ್ವಿಯ ಸಪ್ಟೆಂಬರ ೧೬ ನೇ ತಾರೀಖನ್ನು ಮುಂಬಯಿ ಸರಕಾರದವರು ಗೊತ್ತುಪಡಿಸಿರುತ್ತಾರೆ.

### ಪರಿಶಿಷ್ಟ

೧. ಧಾರವಾಡ ಮುನಸಿಪಲ್ ಬರೊ, ಸದರ ಮುನಸಿಪಲ್ ಬರೋದ ಹೊರಗಿನ ಧಾರವಾಡ ಗ್ರಾಮದ ಕ್ಷೇತ್ರ, ಧಾರವಾಡ ಒಕ್ಕಲತನ ಫಾರ್ಮ ಮತ್ತು ಧಾರವಾಡ ತಾಲೂಕಿನ ಹೊರಗಿನ ಕೆಳಗಿನ ಹಳ್ಳಿಗಳ ಮುಲ್ಕಿ ಸೀಮೆಗಳು:—
(೧) ಹೊಸಯಲ್ಲಾಪುರ (೨) ಲಕಮನಹಳ್ಳಿ (೩) ಸಪ್ತಾಪುರ, (೪) ದೊಡ್ಡನಾಯಕನಕೊಪ್ಪ (೫) ಸೈದಾಪುರ (೬) ಮಾಳಾಪುರ (೭) ಕಮಲಾಪುರ (೮) ಗುಲಗಂಜಿಕೊಪ್ಪ (೯) ನಾರಾಯಣಪುರ (೧೦) ಅತ್ತಿಕೊಳ್ಳ (೧೧) ಕೆಲಗೇರಿ (ರೆವ್ಹಿನ್ಯೂ ಸರ್ವೆ ನಂ. ೩೮೮)

೨. ಗದಗ-ಬೆಟಗೇರಿ ಮುನಸಿಪಲ್ ಬರೋ.

೩. ಹಾವೇರಿ ಮುನಸಿಪಲ್ ಹದ್ದು.

೪. ರಾಣೇಬೆನ್ನೂರು ಮುನಸಿಪಲ್ ಹದ್ದು.

ಸೂಚನೆ:—ಭಾರತ ಸಂರಕ್ಷಣ ಕಾಯಿದೆಯ ೧೧೯ನೇ ನಿಯಮದ (೧) ನೇ ಉಪನಿಯಮವನ್ನನುಸರಿಸಿ, ೧೧ ಸಪ್ಟೆಂಬರ ೧೯೪೬ ನೇ ಸರಕಾರೀ ಪ್ರಕಟನೆಗಳು, ನಾಗರಿಕ ಪೂರೈಕೆ ಖಾತೆಯ, ನಂ. ೧೬೯ (೧೬)/ಡಿ. ಆರ್., ೧೬೯ (೧೬) (ಅ)/ಡಿ. ಆರ್., ೧೬೯ (೧೬) (ಬ)/ಡಿ. ಆರ್., ಮತ್ತು ೧೬೯ (೧೬) (ಕ)/ಡಿ. ಆರ್. ಇವುಗಳಲ್ಲಿಯ ಆಜ್ಞೆಗಳನ್ನು ಕೆಳಗೆ ಕೊಟ್ಟ ರೀತಿಯಲ್ಲಿ ಜಾಹೀರಪಡಿಸತಕ್ಕದ್ದು:—

(ಅ) ಮುಂಬಯಿ ಸರಕಾರದ ಗ್ಯಾಝೆಟದಲ್ಲಿ ಅದನ್ನು ಪ್ರಸಿದ್ಧಿಸಿ.

(ಬ) ಕೆಳಗಿನ ಪತ್ರಿಕೆಗಳಲ್ಲಿ ಅದನ್ನು ಪ್ರಕಟಿಸಿ:—
(೧) ಸಂಯುಕ್ತ-ಕರ್ನಾಟಕ, ಹುಬ್ಬಳ್ಳಿ,
(೨) ಕರ್ನಾಟಕ ಬಂಧು, ಗದಗ
(೩) ಕರ್ಮವೀರ, ಹುಬ್ಬಳ್ಳಿ

(ಕ) ಮೇಲಿನ ಪ್ರಕಟನೆಯ ಹೇಳಿಕೆಗಳನ್ನು ಸಾರಾಂಶದಲ್ಲಿ ವಿವರಿಸುವ ಪತ್ರಿಕಾ-ಸೂಚನೆಯನ್ನು ಸಹ ಪ್ರಸಿದ್ಧಿಸಿ.

(ಡ) ಪ್ರಕಟನೆಯು ಅನ್ವಯಿಸುವ ಕ್ಷೇತ್ರಗಳಲ್ಲಿಯ ಮುಲ್ಕಿ ಅಥವಾ ಬೇರೆ ಸರಕಾರಿ ಕಚೇರಿಗಳಲ್ಲಿಯ ಈ ಬಗ್ಗೆ ಇದ್ದ ನೋಟೀಸ ಬೋರ್ಡುಗಳಿಗೆ ಅವರ ಪ್ರತಿಗಳನ್ನು ಅಂಟಿಸಿ.

ಮುಂಬಯಿ ಗವ್ಹರ್ನರರ ಆಜ್ಞೆಯ ಪ್ರಕಾರ,

ಏ. ಡಿ. ಗೋರವಾಲಾ,

ಕಾರ್ಯದರ್ಶಿ.



### ಮೈಸೂರ ಪ್ರಜಾ ಪ್ರತಿನಿಧಿ ಸಭೆ

# ರಾಜಕೀಯ ಚಳವಳಿಗಾರರಿಗೆ ದಿವಾಣರ ಪ್ರಚ್ಛನ್ನ ಭಯಪ್ರದರ್ಶನ

## ಸರಕಾರದ ಮಸೂದೆಗಳಿಗೆಲ್ಲ ಅರ್ಧಚಂದ್ರ

ಮೈಸೂರು ಪ್ರಜಾ ಪ್ರತಿನಿಧಿ ಸಭೆಯ ದಸರಾ ಅಧಿವೇಶನ (ಪ್ರಾರಂಭ ಸಪ್ಟಂಬರ ೩೦) ಈ ಬಾರಿ ಹಲ ವಿಧದಿಂದ ಹೊಸ ಬಗೆಯದಾಗಿತ್ತು. ಮೊದಲನೆಯದಾಗಿ, ಅಧ್ಯಕ್ಷರು — ದಿವಾಣ ಆರ್ಕಾಟ್ ರಾಮಸ್ವಾಮಿ ಮುದಲಿಯಾರರು— ಹೊಸಬರು. ಅವರು ಮಾತಿನ ನಯ—ವಿನಯದಿಂದಲೇ ವಿರೋಧವನ್ನು ನಿಸ್ಸಹಾಯಗೊಳಿಸುವ ಪ್ರಯತ್ನ ನಡೆಸಿದ್ದರು. ಎರಡನೆಯದಾಗಿ ಬ್ರಾಹ್ಮಣೇತರ ದಿವಾಣ- ಅಧ್ಯಕ್ಷರ ಆಗಮನದಿಂದ ಸಂತುಷ್ಟರಾಗಿಯೋ ಏನೋ ಈ ಹಿಂದೆ ಹೆಚ್ಚಾಗಿ ಕಾಂಗ್ರೆಸ್ ಪಕ್ಷದೊಡನೆ ಮತ ಕೊಡುತಿದ್ದ ಪ್ರಜಾ ಪಕ್ಷದವರು ಈಗ ಸರಕಾರ ದೊಡನೆ ಸೇರಿಕೊಂಡಿದ್ದಾರೆ. ಮತ್ತು ಹಿಂದೂ ಮಹಾಸಭೆಯವರು ಸರಕಾರವನ್ನು ಸೋಲಿಸುವಲ್ಲಿ ಹೆಚ್ಚು ಆಸ್ಥೆ ವಹಿಸಿದ್ದಾರೆ.

ಈ ಬದಲಾವಣೆಗೆ ಸರಿಹೋಗುವಂತೆಯೋ ಏನೋ, ದಸರಾ ಅಧಿವೇಶನ ಪ್ರಾರಂಭವಾಗುವ ಮೊದಲೇ ಸಭಾತ್ಯಾಗದಿಂದ ಮೊದಲಾಯಿತು. ಹೊಸ ದಿವಾಣ ಅಧ್ಯಕ್ಷರು ಸಭೆಯನ್ನು ಪ್ರವೇಶಿಸಿದ ಕೂಡಲೆ ಕಾಂಗ್ರೆಸ್ ಪಕ್ಷದ ನಾಯಕರಾದ ಶ್ರೀ ಕೆ. ಹನುಮಂತಯ್ಯನವರು, ಕಳೆದ ಅಧಿವೇಶನದ ಕಾಲಕ್ಕೆ ಈ ಸಭೆಯ ೨೫೦ ಸದಸ್ಯರು ಹೊಣೆಗಾರ ಸರಕಾರವನ್ನು ಬೇಡಿ ಶ್ರೀಮನ್ಮಹಾರಾಜರಿಗೆ ಕಳಿಸಿದ್ದ ಮನವಿಗೆ ಉತ್ತರ ಬರದಿದ್ದುದನ್ನೂ ಅನಂತರ ಹೊಸ ದಿವಾಣರು ಜನಾಭಿಪ್ರಾಯವನ್ನು ಲೆಕ್ಕಿಸದೆ ನೇಮಕಹೊಂದಿದ್ದನ್ನೂ ಪ್ರತಿಭಟಿಸುವ ಸಲುವಾಗಿ ಸಭೆ ಬಿಟ್ಟು ಹೊರಟುಹೋಗುತ್ತೇವೆ, ಎಂದು ಸಾರಿ ತಮ್ಮ ೧೫ಂಬೆಂಬಲಿಗರೊಡನೆ ಸಭಾತ್ಯಾಗ ಮಾಡಿದರು. ಹಿಂದೂ ಮಹಾಸಭಾ ಪಕ್ಷದ ಭೂಪಾಲಂ ಚಂದ್ರಶೇಖರಯ್ಯನವರು ಕಾಂಗ್ರೆಸ ಹೇಳಿಕೆಗೆ ಬೆಂಬಲವಿತ್ತರೂ ತಾವು ಸಭಾತ್ಯಾಗ ಮಾಡುವದಿಲ್ಲವೆಂದು ಹೇಳಿದರು,

ದಿವಾಣರು ವಿನಯವನ್ನು ತೋರಿಸಿ ಸಭೆ ಪ್ರಾರಂಭವಾಗುವ ಮೊದಲೇ ಪಕ್ಷಗಳ ಹೇಳಿಕೆಗೆ ಅವಕಾಶವಿತ್ತರೂ ತಮ್ಮ ಭಾಷಣದಲ್ಲಿ ಆಹಾರ, ಹಣಕಾಸು ಮೊದಲಾದವುಗಳ ವಿವರಣೆಯ ನಂತರ ಕೊನೆಯಲ್ಲಿ ರಾಜಕೀಯ ಚಳವಳಿಗಾರರಿಗೊಂದು ಸೌಮ್ಯ ಎಚ್ಚರಿಕೆಯನ್ನೀಯದಿರಲಿಲ್ಲ. ಸಂಸ್ಥಾನಕ್ಕೂ ಬ್ರಿಟಿಶ ಪ್ರಾಂತಗಳಿಗೂ ಭೇದವಿರುವದನ್ನು ಲಕ್ಷಿಸದೆ ಅಲ್ಲಿಯಂತೆ ಇಲ್ಲಿಯೂ ಆಗಬೇಕೆಂದು ಕೂಗೆಬ್ಬಿಸುವದು ಸಮಂಜಸವಾಗದು. ಇದರಿಂದ ಈಗ ಆಡಳಿತೆ ಜನರೊಡನಿದ್ದ ಸಂಬಂಧವೂ ದೂರಾಗುವ ಪ್ರಸಂಗ ಬಂದೀತು, ಎಂದರು. ಕೂಗೆಬ್ಬಿಸಿದರೆ ತಮ್ಮ ಸರಕಾರ ಜನ ಪ್ರತಿನಿಧಿಗಳನ್ನು ಇನ್ನಷ್ಟು ದೂರ ತಳ್ಳುವದೆಂದು ಇದರಿಂದ ಬೆದರಿಕೆ ಹಾಕಿದಂತಾಗಿದೆ.

### ನೆಹರೂ ಸರಕಾರಕ್ಕೆ ಅಭಿನಂದನೆ

ಕಾಂಗ್ರೆಸ್ ಪಕ್ಷದ ನಾಯಕರಾದ ಹನುಮಂತಯ್ಯನವರು ನೆಹರೂ ಅವರ ನಡುಗಾಲ ಸರಕಾರವನ್ನು ಅಭಿನಂದಿಸುವ ಗೊತ್ತುವಳಿಯೊಂದನ್ನು ತಂದರು. ಅದಕ್ಕೆ ಕೇವಲ ಮುಸ್ಲಿಂ ಲೀಗಿನವರ ವಿರೋಧ ಬಂತು. ಗೊತ್ತುವಳಿ ಬಹುಮತದಿಂದ ಸ್ವೀಕೃತವಾಯಿತು.

ಪಾಲಳ್ಳಿ ಸೀತಾರಾಮಯ್ಯನವರು (ಕಾಂಗ್ರೆಸ್) ತಂದ ಆಹಾರ ಸಂಬಂಧವಾದ ಅವಸರ ನಿಲುವಳಿ ಮಾತಿನಲ್ಲೇ ಮುಕ್ತಾಯಗೊಂಡರೂ ಎಲ್ಲ ಪಕ್ಷಗಳ ಸದಸ್ಯರೂ ಸರಕಾರದ ಆಹಾರ ನೀತಿಯನ್ನು—ಅದಕ್ಕಿಂತಲೂ ಹೆಚ್ಚಾಗಿ ಅಧಿಕಾರಿಗಳ ಅನ್ಯಾಯ ಅಸಾಮರ್ಥ್ಯಗಳನ್ನು, — ಕಟುವಾಗಿ ಟೀಕಿಸುವ ಅವಕಾಶ ಮಾಡಿಕೊಂಡರು. ಆಹಾರ ಧಾನ್ಯಗಳ ಸೀದಾ ಬೇಕಾದರೆ ಲಂಚಕೊಡಬೇಕಾಗುವದು, ಧಾನ್ಯದೊಡನೆ ಮಣ್ಣು ಸೇರಿಸಿ ಮಾರಲಾಗುತ್ತದೆ, ಸಾಕಷ್ಟು ಆಹಾರ ಸಿಗುವದಿಲ್ಲ, ಇತ್ಯಾದಿಯಾಗಿ ದೂರಿಕೊಳ್ಳಲಾಯಿತು. ದಿವಾಣರು, ಹೊರಗಿಂದ ನೆನಸಿದಷ್ಟು ಧಾನ್ಯ ಸಿಗದಿರುವದೇ ಗೊಂದಲಕ್ಕೆ ಕಾರಣವೆಂದು ತಿಳಿಸಿದರು.

### ಸೋಲುಗಳ ಮಾಲೆ

ಎರಡನೆ ದಿನ (ತಾ. ೧) ಸರಕಾರ ವಿರೋಧ ಪಕ್ಷದವರು ಸೋಲುಗಳ ಮಾಲೆ ಹಾಕಲು ಪ್ರಾರಂಭಿಸಿದರು. ಅಲ್ಕಹಾಲಿನ ಮಿಶ್ರಣವಿಲ್ಲದೆ ಪೆಟ್ರೋಲ ಮಾರುವ ವಿಷಯದಲ್ಲಿ ಸರಕಾರಕ್ಕೆ ಅಧಿಕಾರ ಕೊಡುವ ಮಸೂದೆಯೂ ಸೈನಿಕರು ಶತ್ರುಗಳ ಸೆರೆಯಲ್ಲಿದ್ದಾಗ ಸಾಲ ಸೋಲಗಳ ಬಗ್ಗೆ ದಾವೆಯ ಹಕ್ಕು ಕಳೆದುಕೊಂಡಿದ್ದರೆ ಅದನ್ನು ತಿರುಗಿ ಕೊಡಿಸುವ ಮಸೂದೆಯೂ ಸರಕಾರದಿಂದ ಮುಂದೊಡ್ಡಲ್ಪಟ್ಟು ಕಾಂಗ್ರೆಸ್-ಹಿಂದೂ ಮಹಾಸಭಾ ಪಕ್ಷಗಳ ಸಂಯುಕ್ತ ವಿರೋಧದಿಂದ ಸೋಲಿಸಲ್ಪಟ್ಟವು. ಪ್ರಜಾಪಕ್ಷ ನಾಮಕರಣ ಸದಸ್ಯರು ಸರಕಾರದ ಪರವಾಗಿ ಮತವಿತ್ತರು. ಮಸೂದೆಗೆ ವಿರೋಧವೊಡ್ಡಲು ರಾಜಕೀಯ ಅಸಂತುಷ್ಟಿಯೇ ಕಾರಣವೆಂಬ ಮಾತನ್ನು ವಿರೋಧಿ ಪಕ್ಷದವರು ಮುಚ್ಚಿಡಲು ಯತ್ನಿಸಲಿಲ್ಲ. ಈ ಸರಕಾರದಲ್ಲಿ ನಮಗೆ ವಿಶ್ವಾಸವಿಲ್ಲ. ಅದರಿಂದ ಅದಕ್ಕೆ ಯಾವುದೇ ಹೊಸ ಅಧಿಕಾರ ಕೊಡುವಲ್ಲಿ ನಾವು ಭಾಗಿಗಳಾಗುವದಿಲ್ಲ ಎಂದು ಹೇಳುತಿದ್ದರವರು.

ಮೂರನೇ ದಿನ (ತಾ. ೨) ಸರಕಾರದವರು ಮಂಡಿಸಿದ ಮೋಟಾರ ವಾಹನ ಮತ್ತು ರಸ್ತೆ ಸಾರಿಗೆ ಸಂಬಂಧದ ಮಸೂದೆಯೂ ಇದೇ ಗತಿಯನ್ನು ಕಂಡಿತು. ಈ ಮಸೂದೆಗಳಿಗೆ ಬೆಂಬಲ ದೊರಕಿಸಲು ಸರಕಾರದವರು ಸದಸ್ಯರಲ್ಲಿ ಪ್ರಚಾರ ಮಾಡುತ್ತಿದ್ದರೆಂದು ಕಾಂಗ್ರೆಸ್ ಸದಸ್ಯರು ಆರೋಪಿಸಿದ್ದರಿಂದ ಆರೋಗ್ಯ ಮಂತ್ರಿ ಡಾ. ರಾಯನ್ನರಿಗೂ ಕಾಂಗ್ರೆಸ್ಸಿಗರಿಗೂ ವಾಗ್ಯುದ್ಧವಾಯಿತು. ಕಾಂಗ್ರೆಸ್ ಸದಸ್ಯರನ್ನು "ಬಡಪಾಯಿ" ಗಳೆಂದು ಜರೆದು ನಾಮಕರಣ ಗುಂಪಿನ ದೇವರಾಜೆ ಅರಸಿನವರು ತಮ್ಮ ಮಾತು ಹಿಂತೆಗೆದುಕೊಳ್ಳಬೇಕಾಯಿತು.

### ಬ್ರಾಹ್ಮಣ-ಬ್ರಾಹ್ಮಣೇತರ

ನಾಲ್ಕನೆ ದಿನ (ತಾ. ೩) ಪ್ರಶ್ನೋತ್ತರ ಕಾಲದಲ್ಲಿ ಬ್ರಾಹ್ಮಣ ಬ್ರಾಹ್ಮಣೇತರ ವಾದ ಕಾಣಿಸಿಕೊಂಡಿತು. ಅಸಿಸ್ಟಂಟಕಮೀಶನರುಗಳ ನೇಮಕ (೪೧ ಬ್ರಾಹ್ಮಣೇತರರು, ೬ ಬ್ರಾಹ್ಮಣರು;) ದಲ್ಲಿ ಬ್ರಾಹ್ಮಣರಿಗೆ ಸಂಖ್ಯಾ ಪ್ರಮಾಣ ಮೀರಿ ಏಕೆ ಪ್ರಾತಿನಿಧ್ಯ ಕೊಡಲಾಯಿತೆಂದು ಕೇಳಲಾಯಿತು. ನಿವೃತ್ತ ದಿವಾಣರ ಮಗನೆಂದು ಒಬ್ಬನನ್ನು ಮಂತ್ರಿ ಎಸ್. ಪಿ. ರಾಜಗೋಪಾಲಾಚಾರಿಯವರ ಮಗನೆಂದು ಇನ್ನೊಬ್ಬನನ್ನು ನೇಮಿಸಿಕೊಳ್ಳಲಾಯಿತೆಂದು ತಿಳಿಸಲ್ಪಟ್ಟಿತು.

### ಹಿಂದೂ—ಮುಸ್ಲಿಂ

ಶ್ರೀ ನಾಗಭೂಷಣ ಭಟ್ಟರು ಮುಸ್ಲಿಂ ಹಬ್ಬಗಳಲ್ಲಿ ಮುಸ್ಲಿಮರಿಗೆ ಅನುಕೂಲಮಾಡಿಕೊಟ್ಟಂತೆ ಹಿಂದೂ ಹಬ್ಬಗಳಲ್ಲಿ (ದಸರೆ) ಹಿಂದೂಗಳಿಗೆ ಬಟ್ಟೆ ಹಂಚುವ ವ್ಯವಸ್ಥೆ ಮಾಡದಿರುವದನ್ನು ಚರ್ಚಿಸಲು ತಂದ ನಿಲುವಳಿ ಮಾತಿನಲ್ಲೆ ಮುಗಿಯಿತು.

ಶುಕ್ರವಾರ (ತಾ. ೪) ದಿನವಾದರೂ ಇನ್ನೊಂದು ಬಗೆಯಿಂದ ಹಿಂದೂ-ಮುಸ್ಲಿಂ ಪ್ರಶ್ನೆಯೆದ್ದು ಅಪ್ರಿಯ ಪರಿಣಾಮಕ್ಕಿಟ್ಟುಕೊಂಡಿತು. ಮುಸ್ಲಿಮರ ನಮಾಜಿನ ಹೊತ್ತಿಗೆ ಸಭೆಯನ್ನು ಕೇಳದೆ ಒಂದು ತಾಸು ಮುಂದುವರಿಸಿದ ಅಧ್ಯಕ್ಷರ ಕ್ರಿಯೆಯನ್ನು ವಿರೋಧಿಸಲು ಕಾಂಗ್ರೆಸ್ ಸದಸ್ಯರು ಸಭಾತ್ಯಾಗಮಾಡಿದರು. ಮುಸ್ಲಿಮರ ನಮಾಜಿಗಾಗಿ ಅವಕಾಶಕೊಡಲು ತಮ್ಮ ಆಕ್ಷೇಪವಿದ್ದಿಲ್ಲವೆಂದೂ ಆದರೆ ಮುಸ್ಲಿಮರ ಹಿತ ಸರಕಾರದಿಂದಲೇ ಆಗುವದೆಂದು ತೋರಿಸಿ ಅವರನ್ನು ಒಡೆದು ತಮ್ಮೆಡೆಗೆ ಸೆಳೆದುಕೊಳ್ಳಲು ದಿವಾಣರು ಈ ಕೂಟ ಹೂಡಿದ್ದಾರೆಂಬೂ ಕಾಂಗ್ರೆಸ್ಸಿನವರ ದೂರಾಗಿತ್ತು. ದಿವಾಣರು ಈ ವಿಷಯ ಹಿಂದಿನ ದಿನವೇ ಪಕ್ಷನಾಯಕರನ್ನು ಕೇಳಿಕೊಳ್ಳಲು ಮರೆತದ್ದಕ್ಕಾಗಿ ಕ್ಷಮಾಪಣೆ ಕೇಳಿದರು.

### ಬೆಲ್ಲದ ನಿಲುವಳಿ

ತಾ. ೭ ಕ್ಕೆ ಮಂಡ್ಯ ಜಿಲ್ಹೆಯಲ್ಲಿ ಸಕ್ಕರೆ ಕಾರಖಾನೆಯ ಬಳಿ ಬೆಲ್ಲ ತಯಾರಿಸುವದನ್ನು ನಿರ್ಬಂಧಿಸುವ ಸರಕಾರದ ಹುಕುಮಿನಿಂದ ರೈತರಿಗಾದ ಅನ್ಯಾಯವನ್ನು ಚರ್ಚಿಸಲು ಶ್ರೀ ಎಂ. ಜಿ. ಮಲ್ಲಯ್ಯನವರು ತಂದ ನಿಲುವಳಿ ಸರ್ವಾನುಮತದಿಂದ ಸ್ವೀಕೃತವಾಗಿ ಸರಕಾರಕ್ಕೆ ಪುನಃ ಸೋಲೊದಗಿತು. ಇದರಲ್ಲಿ ಕಾರಖಾನೆದಾರರ ಸ್ವಾರ್ಥವನ್ನು ರಕ್ಷಿಸುವದು ಸರಕಾರದ ಉದ್ದೇಶವಿಲ್ಲವೆಂದೂ ಸಕ್ಕರೆಯ ಉತ್ಪಾದನೆಯಲ್ಲಿ ಕೊರತೆಯಾಗಿದ್ದು ... ಹೆಚ್ಚಿಸಿಕೊಳ್ಳುವದು ಅವಶ್ಯವಾಗಿದೆಯೆಂದೂ ಮುಂತಾಗಿ ಸರಕಾರದವರು ಸ್ಪಷ್ಟೀಕರಣ ಕೊಟ್ಟಿದ್ದು ಸಭೆಗೆ ತೃಪ್ತಿಯುಂಟು ಮಾಡಲಿಲ್ಲ.

### ಘಟನಾ ಸಮಿತಿಯ ಪ್ರಾತಿನಿಧ್ಯ

ಘಟನಾಸಮಿತಿಗೆ ಮೈಸೂರಿಂದ ಲೋಕಪ್ರಿಯ ಪ್ರತಿನಿಧಿಗಳನ್ನು ಕಳಿಸದೆ ಇದ್ದುದನ್ನು ಚರ್ಚಿಸಲು ಕಾಂಗ್ರೆಸ್ ಪ್ರತಿನಿಧಿಗಳು ಮೊದಲನೆ ದಿನವೇ ನಿಲುವಳಿ ತಂದಿದ್ದುದನ್ನು ಅಧ್ಯಕ್ಷರು ಕಿತ್ತುಹಾಕಿ ಈ ಸಂದರ್ಭದಲ್ಲಿ ಬಂದ ಅರಿಕೆಯನ್ನು ಎತ್ತಿಕೊಂಡಾಗ ಮಾತಾಡಬಹುದೆಂದು ಸೂಚಿಸಿದ್ದರು. ಅದರ ಚರ್ಚೆ ತಾ. ೪ ಕ್ಕೆ ಪ್ರಾರಂಭವಾಗಿದ್ದು ತಾ. ೮ ಕ್ಕೆ ಮುಗಿಯಿತು. ಚರ್ಚೆಗೆ ಉತ್ತರ ಕೊಡುತ್ತ ದಿವಾಣ ರಾಮಸ್ವಾಮಿ ಮುದಲಿಯಾರರು, ಘಟನಾ ಸಮಿತಿಯ ಐಕ್ಯಯ ಪದ್ಧತಿಯನ್ನು ಇನ್ನೂ ನಿರ್ಧರಿಸಿಲ್ಲವೆಂದೂ ಆದರೆ ಎರಡೂ ...




### ಮುಂಬಯಿ ಶೇರ ಪೇಟೆ

ತಾ ೯— ಮುಂಬಯಿ ಶೇರಪೇಟೆಯಲ್ಲಿ ಕಳೆದೆರಡು ವಾರಗಳಿಂದ ಅರಿವೆಯ ಬೆಲೆಯನ್ನು ಏರಿಸಲು ಸರಕಾರ ಸಿದ್ಧವಿಲ್ಲ ಮತ್ತು ಮುಸ್ಲಿಂ ಲೀಗಿನ ಉಗ್ರಧೋರಣೆ ಹೀಗೇ ಉಳಿಯುವದು ಎಂಬೆರಡು ಕಾರಣಗಳಿಂದ ಬೆಲೆಗಳು ಬಹಳ ಇಳಿದು ಹೋಗಿದ್ದವುಗಳು ಈ ವಾರ ಸ್ವಲ್ಪ ಸುಧಾರಿಸಿಕೊಂಡಿವೆ. ಇದಕ್ಕೆ ದಿಲ್ಲಿ ಮಾತುಕತೆಗಳ ಯಶಸ್ವಿ ಮುನ್ನಡೆಯ ಸುದ್ದಿಗಳೂ ಕಾರಣವಾಗಿದ್ದವು. ಹೀಗೆ ಒಂದು ಸಿಟ್ಟಿನಲ್ಲಿ ೨೯೧೫ರ ವರೆಗೂ ಇಳಿದು ಹೋಗಿದ್ದ ಟಾಟಾ ಸ್ಟೀಲ ಡೆಫರ್ಡ ಪಾಲುಗಳು ರೂ. ೩೦೪೦—೦—೦ರ ವರೆಗೇರಿ ೩೦೨೫—೦—೦ ಗೆ ಇಳಿಯಿತು. ಜವಳಿ ಪಾಲುಗಳಿಗೆ ಈಗ ಹೆಚ್ಚು ಪ್ರಾಶಸ್ತ್ಯವುಂಟಾಗಿವೆ. ಮುಂಬಯಿ ಡಾಯಿಂಗ ಪಾಲು ಟಾಟಾ ಡೆಫರ್ಡಗಿಂತಲೂ ಹೆಚ್ಚಿನಮಟ್ಟದಲ್ಲಿ ನಿಂತು ೩೯೯೦—೦—೦ರ ವರೆಗೇರಿ ೩೦೮೦—೦—೦ಕ್ಕೆ ಬಂತು. ಫಿನಲೇ ೪೧೭—೦—೦ ರಿಂದ ೪೩೪-೦-೦ ಕ್ಕೇರಿ ೪೩೦—೦—೦ಕ್ಕೂ ಕೋಹಿನೂರು ೯೧೯—೦—೦ ರಿಂದ ೯೭೭ಕ್ಕೂ ಸ್ವದೇಶಿ ೭೩೨-೦-೦ ರಿಂದ ೮೦೫-೦-೦ ಕ್ಕೇರಿ ೭೮೮-೦-೦ ಕ್ಕೂ ಗೋಕಾಕ ೪೦೯-೦-೦ ರಿಂದ ೪೩೦-೦-೦ ಕ್ಕೂ ಸೆಂಟ್ರಲ ಇಂಡಿಯಾ ೪೧೧-೦-೦ ರಿಂದ ೪೩೭-೦-೦ ಕ್ಕೂ ಹೋದವು. ಸಿಂಧ್ಯ ಸ್ಟೀಮ ರೂ. ೫೦-೦-೦ ರ ಸುತ್ತ ಸುಳಿಯುತಿದ್ದರೆ ಅಸೋಸಿಯೇಟೆಡ ಸಿಮೆಂಟ್ಸ ೨೪೪-೮-೦ ರಿಂದ ೨೪೭-೮-೦ ಗೇರಿವೆ. ಬ್ಯಾಂಕುಗಳಲ್ಲಿ ಸೆಂಟ್ರಲ ೧೩೨-೦-೦ ರಿಂದ ೧೩೬-೦-೦ ಕ್ಕೂ ಇಂಪೀರಿಯಲ್ ಎಸ್. ಬಿ. ೨೮೪೫ ರಿಂದ ೨೯೦೦-೦-೦ ಕ್ಕೂ ರಿಜರ್ವ ೧೫೪-೪-೦ ರಿಂದ ೧೫೮-೦-೦ಕ್ಕೂ ಏರಿವೆ. ಹಿಂದುಸ್ತಾನ ಸರಕಾರದವರು ಹೇಳಿಕೆ ಹೊರಡಿಸಿ ಸರಕಾರದ ಸ್ಟರ್ಲಿಂಗ್ ಧೋರಣೆಯಿಂದ ದೇಶದ ಔದ್ಯೋಗಿಕ ಪ್ರಗತಿಗೆ ತಡೆ ಬೀಳದಂತೆ ನೋಡಿಕೊಳ್ಳುವ ಭರವಸೆಯಿತ್ತಿರುವದು ಬೆಲೆಗಳ ಮೇಲೆ ಸತ್ಪರಿಣಾಮ ಮಾಡಬಹುದು.

ಸರಕಾರಿ ಭದ್ರತೆಗಳಲ್ಲಿ ಜಿ. ಪಿ. ನೋಟು ೧೦೪-೧-೦ ರಿಂದ ೧೦೪-೧೪-೦ ಕ್ಕೂ ೩½% ೧೯೪೭-೫೦— ಸಾಲ ೧೦೨-೬-೦ ರ ಸುತ್ತಲೂ ಇದೆ.

### ಚಿನ್ನ ಬೆಳ್ಳಿ

ವಿದೇಶಗಳಿಂದ ಸ್ವಲ್ಪ ಚಿನ್ನ ಬಂದಿದೆಯೆಂಬ ಸುದ್ದಿಯಿಂದ ಕಳೆದವಾರ ಬೆಲೆ ಅಷ್ಟು ಮುಂದುವರಿಯದಿದ್ದರೂ ೯೮—೮—೦ ಕೆಳಗೆ ಇಳಿಯಲಿಲ್ಲ. ಅದ ಸುಳಿಸುಳಿದಾಡಿ ೧೦೦-೫-೦ ವರೆಗೆ ಹೋಗಿ ೯೯—೮—೦ ಗಿಳಿದು ಇಂದು ಮತ್ತೆ ೧೦೦-೩-೦ ಗೇರಿತು. ವಾಯಿದಾ ೯೨-೧೪-೦ರಿಂದ ೯೪-೩-೦ ಕ್ಕೇರಿದೆ. ಬೆಳ್ಳಿ ತಯಾರಿ ೧೬೮-೮-೦ ಕ್ಕಿಳಿದು ೧೭೦-೧೦-೦ ಕ್ಕೇರಿದೆ. ವಾಯಿದಾ ೧೬೩-೧೦-೦

### ಅರಳೆ

ಸರಕಾರದ ಅರಳೆ ನಿರ್ಯಾತ ಧೋರಣೆ ಬದಲಾಗುವದಿಲ್ಲವೆಂಬದರಿಂದ ಕಳೆದ ವಾರ ಅರಳೆ ಬಹಳ ಇಳಿಮುಖವಾಗಿದ್ದುದು ಈವಾರ ದಿಲ್ಲಿಯಿಂದ ಈಸ್ಟ ಇಂಡಿಯಾ ಕಾಟನ್ ಅಸೋಸಿಯೇಶನ್ನಿನ ಅಧ್ಯಕ್ಷರಾದ ಪುರುಷೋತ್ತಮದಾಸರ ಪ್ರಯತ್ನಗಳ ಒಳ್ಳೆ ಸುದ್ದಿ ಬಂದು ತುಸ ೨ ಸುಧಾರಿಸಿತು. ಜನೆವರಿ ವಾಯಿದೆ ೪೩೪-೦-೦ರ ವರೆಗೂ ಇಳಿದು ೪೩೭-೮-೦ ಕ್ಕೆ ಸುಧಾರಿಸಿದೆ. ಮಾರ್ಚ ೪೪೫—೮—೦.

### ಎಣ್ಣೆ ಕಾಳು

| | |
|---|---|
| ಶೇಂಗಾ | ೧೦೭—೦—೦ |
| ಅಗಸಿ | ೨೩-೪-೦ |
| ಅಗಸಿ ಎಣ್ಣೆ | ೧೫-೪-೦ |

### ಸಾಂಗಲಿ ಪೇಟೆ

| | |
|---|---|
| ಬೆಲ್ಲ ಬಂಗಾಲಿ ಮಣ ರೂ. | ೧೪-೧೬ |
| ಅರಿಷಣ ಹೇರು | ೮೫-೯೨ |
| ಶೇಂಗಾ ಖಂಡಿ ,, | ೯೦-೯೨ |
| ಮೆಣಸಿನಕಾಯಿ ಹೇರು ,, | ೧೮೫-೨೦೫ |
| ಮಿರ್ಜಿ ತಂಬಾಕು ಹೇರು | ೧೦೦-೨೦೦ |
| ತಂಬಾಕ ಪಂಢರಪುರಿ ,, | ೧೫೦-೨೫೦ |
| ತಂಬಾಕು ಅಕೋಳ(ಹೇರು) | ೨೫೦-೩೭೫ |

### ಶಿವಮೊಗ್ಗೆ

| | |
|---|---|
| ಅಡಿಕೆ ದೇಶಾವರ ನಂ ೧ ಮಣ ೧ಕ್ಕೆ | ೩೫-೩೭ |
| ,, ,, ೨ | ೩೨-೩೪ |
| ರಾಜಾ ಅಲವು | ೩೦-೩೪ |
| ಬೆಟ್ಟೆ | ೨೩-೨೪ |
| ನಂಕಿ | ೨೫-೨೬ |
| ಸುಲಿ | ೩೫-೩೭ |
| ಕೊರಸಾಲು | ೩೦-೩೫ |
| ನೂಣಸು | ೨೨-೨೪ |

### ಹುಬ್ಬಳ್ಳಿ ಪೇಟೆ

| | | |
|---|---|---|
| ಜಯವಂತ ಹತ್ತಿ | ನಂ. ೧ | ೨೯೦-೯೫ |
| ,, | ನಂ. ೨ | ೨೮೦-೮೫ |
| ,, | ನಂ. ೩ | ೨೭೦-೭೫ |
| ಅಪ್ಲಂಡ ಹತ್ತಿ | | ೨೭೦-೭೫ |
| ಜಿನ | | ೨೧೫-೨೨೦ |
| ಸಾಜಿನ | | ೨೦೦ |
| ಡಬಲರೋಲ | | ೨೦೦-೨೧೦ |

## ಮುಂಬಯಿ--ಕಲಕತ್ತೆ ಮೊದಲಾದ ಕಡೆ ಇರಿತಗಳು

ಮುಂಬಯಿ, ಕಲಕತ್ತಾ, ಡಾಕಾ ಮೊದಲಾದ ಕಡೆ ನಡೆದ ಇರಿತಗಳು ಇನ್ನೂ ಸಾಗಿವೆ. ಡಾಕಾದಲ್ಲಿ ಇರಿತ ಮತ್ತು ಗುಂಡುಗಳಿಂದ ಈ ವರೆಗೆ ೯೭ ಜನ ಮರಣ ಹೊಂದಿದ್ದು ೩೦೦ ಕ್ಕಿಂತ ಹೆಚ್ಚು ಜನ ಗಾಯಗೊಂಡಿರುವರು. ಮುಜಫರಪುರದಲ್ಲಿಯ ದೊಂಬಿಯಲ್ಲಿ ೧೩ ಜನ ಮರಣ ಹೊಂದಿದ್ದು ೮ ಜನ ಗಾಯಗೊಂಡಿರುವರು. ಅಹಮದಾಬಾದದಲ್ಲಿ ಮತ್ತೆ ೧೬೦೦ ಚಾಕುಗಳನ್ನು ಜಪ್ತಮಾಡಿದ್ದಾರೆ. ಇದಲ್ಲದೆ ೨ ಬರ್ಚಿಗಳೂ ಸಿಕ್ಕಿವೆ. ಇವೆಲ್ಲ ಪಂಜಾಬದಲ್ಲಿಯ ನೈಜಾಮುಬಾದದಿಂದ ಬಂದಿದ್ದವಂತೆ. ಮುಂಬಯಿ ಮತ್ತು ಕಲಕತ್ತೆಗಳಲ್ಲಿ ಇರಿತಗಳು ಸ್ವಲ್ಪ ಮಟ್ಟಿಗೆ ಕಡಿಮೆಯಾಗಿವೆ. ಆದರೂ ಇನ್ನೂ ಪೂರ್ಣ ನಿಂತಿಲ್ಲ. ಕುರ್ಲಾಡದಲ್ಲಿಯ ಶ್ರೀ ಎಂ ಎನ್ ಪಾಟಣಕರ ಮತ್ತು ಬಿ. ವಿ. ಭಿಡೆ ಎಂಬ ಇಬ್ಬರು ತರುಣ ಕಾರ್ಯಕರ್ತರು ಶಾಂತಿಯನ್ನು ಪ್ರಸ್ಥಾಪಿಸಲು ಪ್ರಯತ್ನಿಸುತಿರುವಾಗ ಪುಂಡರ ಪ್ರಾಣಘಾತಕ ಚಾಕುವಿನ ಇರಿತಕ್ಕೆ ಆಹುತಿಯಾದರು. ಈ ಸಂಬಂಧದಲ್ಲಿ ಮುಂಬಯಿ ಮುಖ್ಯ ಮಂತ್ರಿಗಳಾದ ಶ್ರೀ ಬಾಳಾಸಾಹೇಬ ಖೇರರು ಪ್ರಕಟನೆ ಹೊರಡಿಸಿ ಈ ಕಾರ್ಯಕರ್ತರ ಕೊಲೆಗಾಗಿ ವಿಷಾದ ಪ್ರದರ್ಶಿಸಿದ್ದಾರೆ.

ಕರ್ಫ್ಯೂ ಹುಕುಮನ್ನು ಮತ್ತೆ ಒಂದು ವಾರ ಬೆಳೆಸಲಾಗಿದೆ.

ಮುಂಬಯಿಯಲ್ಲಿ ಈ ರೀತಿಯಾಗಿ ಇರಿತಗಳು ಹಾಗೆಯೆ ಸಾಗಿದ್ದರಿಂದ ಜನರು ನಗರ ಬಿಟ್ಟು ಸುರಕ್ಷಿತ ಸ್ಥಳಕ್ಕೆ ಹೋಗುವ ಉಪಕ್ರಮ ಕೈಕೊಂಡಿದ್ದಾರೆ. ಸಪ್ಟಂಬರ ೧ ರಿಂದ ೨೦ ರ ವರೆಗೆ ೨೦ ದಿನಗಳಲ್ಲಿ ಸುಮಾರು ೬ ಲಕ್ಷ ಜನ ಮುಂಬಯಿ ಬಿಟ್ಟು ಹೋಗಿರುವರು. ಬೋರೀಬಂದರ,ಬಾಯಖಳಾ,ದಾದರ ಸ್ಟೇಶನಗಳಮೇಲೆ ಪ್ರವಾಸಿಕರ ಸಮ್ಮರ್ದ ಹೆಚ್ಚಾದ್ದರಿಂದ ಅವರೆಲ್ಲರಿಗೆ ತಿಕೀಟುಕೊಡಿಸುವುದಕ್ಕಾಗಿ ಪ್ರತ್ಯೇಕ ತಿಕೆಟ ಕಚೇರಿಗಳನ್ನು ತೆರೆಯಬೇಕಾಯಿತು. ಮತ್ತು ಹೆಚ್ಚಿನ ಗಾಡಿಗಳನ್ನೂ ಬಿಡಬೇಕಾಯಿತು.

ಬಂಗಾಲ ಸರಕಾರವು ವಿಶೇಷ ಗ್ಯಾಜಿಟ ಹೊರಡಿಸಿ ಬಂಗಾಲದಲ್ಲಿಯ ಜಾತೀಯ ದೊಂಬಿಗಳಿಗೆ ಸಂಬಂಧಿಸಿದ ಸುದ್ದಿಯನ್ನು ಪ್ರಕಟ ಮಾಡಬಾರದೆಂದೂ ಮುದ್ರಿಸಬಾರದೆಂದೂ ಹಂಚಬಾರದೆಂದೂ ಸಂರಕ್ಷಣ ಕಾಯದೆಯನ್ವಯ ಹುಕುಮು ಹೊರಡಿಸಿದೆ. ಬಂಗಾಲ ಮುಖ್ಯ ಮಂತ್ರಿಗಳು ಈ ಸಂಬಂಧದಲ್ಲಿ ಕೊಟ್ಟ ಅಶ್ವಾಸನದಂತೆ ನಡೆಯದೆ ಇಂಥ ನಿರ್ಬಂಧಕ ಹುಕುಮು ಹೊರಡಿಸಿದ್ದರ ನಿಷೇಧಾರ್ಥವಾಗಿ ಕಲಕತ್ತೆಯ ೨೧ ಪತ್ರಿಕೆಗಳು ತಮ್ಮ ಪ್ರಕಟನೆಗಳನ್ನು ನಿಲ್ಲಿಸಿದ್ದವು. ಹೀಗೆ ಪತ್ರಿಕೆಗಳೂ ನಿಂತರೂ ಜಾತೀಯ ದೊಂಬಿಯೇನು ಕಡಮೆಯಾಗದ್ದರಿಂದ ಪತ್ರಿಕೆಗಳು ಜಾತೀಯ ದೊಂಬಿಗಳನ್ನು ಹೆಚ್ಚಿಸುತಿರುವವೆಂಬ ಸರಕಾರದ ಆರೋಪ ಸುಳ್ಳಾಯಿತು ಎಂದು ಈ ಪತ್ರಿಕಾ ಸಂಪಾದಕರು ಸಾರಿ ೧ ನೇ ತಾರೀಖಿನಿಂದ ಮತ್ತೆ ಪತ್ರಿಕೆಗಳನ್ನು ಪ್ರಾರಂಭಿಸಿರುವರು.



## ಧಾರವಾಡ--ಬೆಳಗಾವಿ ಜಿಲ್ಹೆಗಳಲ್ಲಿ ಮಂತ್ರಿಗಳ ಸಂಚಾರ

ಮುಖ್ಯ ಮಂತ್ರಿ ಶ್ರೀ ಖೇರರು ಶ್ರೀಮತಿ ಖೇರ ಆರೋಗ್ಯ ಮಂತ್ರಿ ಡಾ. ಗಿಲ್ಡರ ಮತ್ತು ಪಾರ್ಲಮೆಂಟರಿ ಸೆಕ್ರೆಟರಿಗಳೊಂದಿಗೆ ೨೮ ನೇ ತಾರೀಕು ಮುಂಜಾನೆ ಬೆಳಗಾವಿಗೆ ಬಂದರು. ಸ್ಟೇಶನದಲ್ಲಿ ಅವರಿಗೆ ಸಂಭ್ರಮದ ಸ್ವಾಗತವೀಯಲಾಯಿತು. ಸ್ಟೇಶನದಿಂದ ಶ್ರೀ ಲಕ್ಷ್ಮಿಯವರಲ್ಲಿ ಉಪಹಾರ ತೀರಿಸಿಕೊಂಡು ಲೋಕಲ್‌ಬೋರ್ಡ ಮತ್ತು ಮುನಸಿಪಾಲಟಿ ಮಾನಪತ್ರ ಸ್ವೀಕರಿಸಲು ಮುನಸಿಪಾಲಟಿಗೆ ಹೋದರು. ಮುನಸಿಪಾಲಿಟಿ ಮಾನಪತ್ರವನ್ನು ಹಿಂದಿಯಲ್ಲಿ ಶ್ರೀ ಖೇರರಿಗೆ ಅರ್ಪಿಸಲಾಯಿತು. ಡಾ. ಗಿಲ್ಡರರಿಗೆ ಅರ್ಪಿಸುವ ಮಾನಪತ್ರವನ್ನು ಮರಾಠಿಯಲ್ಲಿ ಓದಿದ ಕೂಡಲೆ ಶ್ರೀ ಅರವಿಂದ ಜೋಶಿ ಮೊದಲಾದವರು ಎದ್ದು ನಿಂತು ನಿಷೇಧ ಪ್ರದರ್ಶಿಸಿದರು. ಅಗ ಕೆಲವರು ಗೊಂದಲ ಹಾಕಿ ಅರವಿಂದರನ್ನು ಥಳಿಸಿದರು. ಗೊಂದಲದಲ್ಲಿಯೆ ಮಾನಪತ್ರ ಓದುವದು ಮುಗಿಯಿತು. ಶ್ರೀ ಖೇರರು ವ್ಯಾಸಪೀಠದಿಂದ ಎದ್ದು ಹೋಗಿ ಶಾಂತತೆಯನ್ನು ಪ್ರಸ್ಥಾಪಿಸಿದರು. ಮಾನಪತ್ರಕ್ಕೆ ಸಮಯೋಚಿತ ಉತ್ತರ ಕೊಟ್ಟ ಬಳಿಕ ಈ ಕಾರ್ಯಕ್ರಮ ಕೊನೆಗಂಡಿತು.

ಅಂದು ಮಧ್ಯಾನ್ಹ ಮಂತ್ರಿದ್ವಯರು ಸಪರಿವಾರ ಧಾರವಾಡಕ್ಕೆ ಬೆಳಗಾವಿಯಿಂದ ಕಾರಿನಲ್ಲಿ ಬಂದರು. ಧಾರವಾಡ ನಗರ ಸಭೆಯವರು ಅದೇ ದಿನ ಮಧ್ಯಾನ್ಹ ಶ್ರೀ ಖೇರರಿಗೂ ಡಾ. ಗಿಲ್ಡರರಿಗೂ ಮಾನಪತ್ರವನ್ನರ್ಪಿಸಿದರು. ಅನಂತರ ಡಿ. ಡಿ. ಟಿ. ಪ್ರಯೋಗದ ಕಾರ್ಯಕ್ರಮ ಜರಗಿತು. ಡಾ. ಗಿಲ್ಡರರು ನಂತರ ಸಿವಿಲ್ ಅಸ್ಪತ್ರೆಗೆ ಭೆಟ್ಟಿ ಕೊಟ್ಟು ಒಕ್ಕಲತನ ಕಾಲೇಜ ಧಾರವಾಡದಲ್ಲಾಗಬೇಕೆಂಬ ಶಿಷ್ಟ ಮಂಡಳದವರಿಗೆ ಭೆಟ್ಟಿ ಕೊಟ್ಟರು. ಮುಖ್ಯ ಮಂತ್ರಿಗಳು ಕೆ. ಈ. ಬೋರ್ಡ ಧಾರವಾಡ ಹಾಯಸ್ಕೂಲ ಕಟ್ಟಡದ ಉದ್ಘಾಟನೆ ಜರುಗಿಸಿ ವಿದ್ಯಾರ್ಥಿ ಕೂಟದ ಸಭೆಯ ಅಧ್ಯಕ್ಷತೆಯನು ವಹಿಸಿದರು. ಧಾರವಾಡದ ಕಾರ್ಯಕ್ರಮ ಮುಗಿಸಿಕೊಂಡು ಹುಬ್ಬಳ್ಳಿಗೆ ಬಂದರು. ಶ್ರೀ ಖೇರರು ಹುಬ್ಬಳ್ಳಿಯಿಂದ ಕುಂದಗೋಳಕ್ಕೆ ಹೋಗಿ ಅಲ್ಲಿ ಕೊಡಲ್ಪಟ್ಟ ಮಾನಪತ್ರಗಳನ್ನು ಸ್ವೀಕರಿಸಿ ಸಮಯೋಚಿತ ಉತ್ತರ ಕೊಟ್ಟರು. ಅನಂತರ ರೇಲ್ವೆಯಿಂದ ಹುಬ್ಬಳ್ಳಿಗೆ ಬಂದರು. ಕ. ಪ್ರಾಂ. ಕಾಂಗ್ರೆಸ ಕಮೀಟಿಯಲ್ಲಿ ಕೂಡಿದ ಕಾಂಗ್ರೆಸ ಕಾರ್ಯಕರ್ತರ ಸಭೆಯಲ್ಲಿ ಗಾಂಧೀ ಸಂದೇಶದ ಬಗ್ಗೆ ಐದು ನಿಮಿಷ ಮಾತಾಡಿದರು. ಅಲ್ಲಿಂದ ಗದುಗಿಗೆ ಪ್ರಯಾಣ ಬೆಳಿಸಿದರು.

ಡಾ. ಗಿಲ್ಡರರು ಹುಬ್ಬಳ್ಳಿಯಲ್ಲಿಯ ಕಾರ್ಯಕ್ರಮ ಮುಗಿಸಿಕೊಂಡು ಪುಣೆಗೆ ಹೋದರು.

ಶ್ರೀ ಖೇರರು ಗದುಗಿನಲ್ಲಿ ಕರ್ನಾಟಕ ಲಿಂಗಾಯತ ಎಜ್ಯುಕೇಶನಲ್ ಸೊಸಾಯಿಟಿ ಪರವಾಗಿ ಭೂಮರಡ್ಡಿ ಪೋಲಿಟೆಕ್ನಿಕ್‌ದವರು ಕೊಟ್ಟ ಮಾನಪತ್ರ ಸ್ವೀಕರಿಸಿ ಸಮಯೋಚಿತ ಉತ್ತರ ಕೊಟ್ಟರು.

೨೯ ನೇ ತಾರೀಕು ಮುಂಜಾನೆ ಉಪಹಾರ ತೀರಿಸಿಕೊಂಡು ಮುಖ್ಯ ಮಂತ್ರಿಗಳು ಪರಿವಾರದೊಂದಿಗೆ ಸವಣೂರಿಗೆ ಹೋದರು. ಅಲ್ಲಿ ನವಾಬರು ಅವರಿಗೆ ಆದರಾತಿಥ್ಯ ಮಾಡಿದರು. ಕಸ್ತೂರಿಬಾ ಫಂಡಿಗೆ ಶ್ರೀ ಹಾವಣಗಿಯವರು ೧೫೦ ರೂ. ಕೊಟ್ಟರು. ಮುಂದೆ ೧-೩೦ ಗಂಟೆಗೆ ಬ್ಯಾಡಗಿಗೆ ಹೋದರು. ಬ್ಯಾಡಗಿ, ಹಂಸಭಾವಿ ಕಾರ್ಯಕ್ರಮ ಮುಗಿಸಿ ಹೊಸಳ್ಳಿಗೆ ಬರುವಷ್ಟರಲ್ಲಿ ವಿಪರೀತ ಮಳೆ ಹತ್ತಿತು. ಶ್ರೀಮತಿ ಖೇರರು ಹಿಂದುಳಿದರು. ಮುಖ್ಯ ಮಂತ್ರಿಗಳು ಮಳೆಯಲ್ಲಿಯೆ ಹೊಸಳ್ಳಿಯ ನೀರಿನ ಯೋಜನೆಯ ಕಾರ್ಯಕ್ರಮವನ್ನು ಜರಗಿಸಿದರು. ಅಲ್ಲಿಂದ ಪೋಲೀಸ ಇನಸ್ಪೆಕ್ಟರ ರಾಯಚೂರರ ಸಹಾಯದಿಂದ ಪೋಲೀಸ ಜೀಪದಲ್ಲಿ ಮಧ್ಯ ರಾತ್ರಿ ಸುಮಾರಿಗೆ ರಟ್ಟೀಹಳ್ಳಿ ಬಂಗಲೆ ಮುಟ್ಟಬೇಕಾದರೆ ಸಾಕುಬೇಕಾಗಿ ಹೋಯಿತು.

ಈ ರೀತಿ ಮಳೆ ವಿಪರೀತವಾದ್ದರಿಂದ ಮುಖ್ಯ ಮಂತ್ರಿಗಳು ೩೦ನೇ ತಾರೀಕಿನ ತಮ್ಮ ಕಾರ್ಯಕ್ರಮ ರದ್ದುಮಾಡಿ ನೇರವಾಗಿ ಧಾರವಾಡಕ್ಕೆ ಹೋಗಿ ಅಲ್ಲಿ ಶ್ರೀ ಕರಮರಕರರ ಮನೆಯಲ್ಲಿ ಭೋಜನ ತೀರಿಸಿಕೊಂಡು ಬೆಳಗಾವಿಗೆ ಹೋದರು. ಬೆಳಗಾವಿ ಕಾರ್ಯಕ್ರಮ ತೀರಿಸಿ ಪುಣೆಗೆ ಹೋದರು.

## ಪುಣೆಯಲ್ಲಿ ಕರ್ನಾಟಕ ಏಕೀಕರಣ ಹಬ್ಬದ ಆಚರಣೆ

ವಿಜಯದಶಮಿಯ ದಿನ ಪುಣೆಯಲ್ಲಿ ಮರಾಠಿ ಟ್ರೇನಿಂಗ ಕಾಲೇಜಿನಲ್ಲಿ ಕರ್ನಾಟಕ ಏಕೀಕರಣ ಹಬ್ಬವು ವೈಭವದಿಂದ ಜರಗಿತು. ಶ್ರೀಕೃಷ್ಣ ಕುಮಾರ ಕಲ್ಲೂರರು ಮುಖ್ಯ ಅತಿಥಿಗಳಾಗಿದ್ದರು. ಮುಂಜಾವಿನಿಂದ ರಾತ್ರಿಯ ವರೆಗೂ ವಿವಿಧ ಕಾರ್ಯಕ್ರಮಗಳಿದ್ದವು. ಮುಂಬಯಿ ಶಾಸನಸಭೆಯ ಉಪಾಧ್ಯಕ್ಷರಾದ ಶ್ರೀ ಅಂಗಡಿ ಷಣ್ಮುಖಪ್ಪನವರು ಉದ್ಘಾಟನ ಸಮಾರಂಭವನ್ನು ನೆರವೇರಿಸಿದರು. ಕಾರ್ಯದರ್ಶಿಗಳಾದ ಶ್ರೀ ಕಟ್ಟಿಯವರು ಸಂಘದ ಹಿಂದಿನ ವರ್ಷದ ವರದಿಯನ್ನು ಸಂಕ್ಷೇಪತಃ ಓದಿದರು. ಸಂಘದ ಕಾರ್ಯಾಧ್ಯಕ್ಷರಾದ ಶ್ರೀ ಎಸ್. ಟಿ. ಪಪ್ಪು ಇವರು ಭಾಷಣ ಮಾಡುತ್ತ ಉದ್ಘಾಟನೆ ಮಾಡಲು ಒಪ್ಪಿದ್ದ ಶ್ರೀ ಅಂಗಡಿ ಮತ್ತು ಸಭೆಗೆ ಬಂದಿದ್ದ ಶಾಸನಸಭಾಸದ ಸದಸ್ಯರ ಅಭಿನಂದನೆ ಮಾಡಿದರು ಮತ್ತು ಎಲ್ಲರನ್ನು ಸ್ವಾಗತಿಸಿದರು. ಆ ಮೇಲೆ ಕೆಲ ವಿನೋದಾವಳಿಗಳು ಮತ್ತು ಭಾಷಣ ಸ್ಪರ್ಧೆ ನಡೆದು ಮಧ್ಯಾನ್ಹದವರೆಗೆ ಸಭೆ ಮುಂದರಿಯಿತು. ಭಾಷಣ ಸ್ಪರ್ಧೆಯಲ್ಲಿ ಕುಮಾರ ಕೃಷ್ಣ ಕಡಕೋಳ, ಕುಮಾರಿ ಲಲಿತಾ ಕಡಕೋಳ ಮತ್ತು ಶ್ರೀಮತಿ ಸರೋಜಾಬಾಯಿ ಕಟ್ಟಿ ಇವರಿಗೆ ಮೆಚ್ಚುಗಳು ದೊರೆತವು.

ಮಧ್ಯಾನ್ಹ ಸ್ತ್ರೀ ಭಾಗವತರ ಕಾವ್ಯಗಾಯನವಾಯಿತು. ಅನಂತರ ಶಾಸನಸಭೆಯ ಕನ್ನಡ ಸದಸ್ಯರ ಅಭಿನಂದನ ಮಾಡಲಾಯಿತು. ಶ್ರೀ ಎಸ್. ಟಿ. ಪಪ್ಪು ಅವರು ಮಾತಾಡುತ್ತ ಪುಣೆಯಲ್ಲಿ ಕನ್ನಡಿಗರ ಸಂಖ್ಯೆ ಮಿತಿಮೀರಿ ಬೆಳೆದಿದೆ ಅವರೆಲ್ಲರೂ ಒಕ್ಕಟ್ಟಿಗೆ ಇದ್ದು ಕನ್ನಡ ನಾಡಿನ ಸಂಸ್ಕೃತಿಯನ್ನು ಹೊರನಾಡಿನಲ್ಲಿ ಎತ್ತಿಹಿಡಿಯಬೇಕಾದರೆ ಕರ್ನಾಟಕ ಕಾಲನಿ; ಕ್ಲಬ್, ಹಾಸ್ಟೆಲ್ ಲಾಯಬ್ರರಿ, ಕನ್ನುಮರ್ಸ್ ಸೊಸಾಯಿಟಿ ಮೊದಲಾದವುಗಳ ಅವಶ್ಯಕತೆಯಿದೆ. ಇವು ಸಾಧ್ಯವಾಗುವಂತೆ ಕನ್ನಡ ನಾಡಿನ ಮಾನ್ಯ ಪ್ರತಿನಿಧಿಗಳು ಸಹಾಯ ಮಾಡಬೇಕೆಂದು ಕೇಳಿಕೊಂಡರು. ಶ್ರೀ ವೀರನಗೌಡರು ಎಲ್ಲ ಪ್ರತಿನಿಧಿಗಳ ಪರವಾಗಿ ಉತ್ತರ ಕೊಡುತ್ತ ನಮ್ಮ ಧ್ಯೇಯ ಹಿಂದೀ ಸ್ವಾತಂತ್ರ್ಯ ಮತ್ತು ಕರ್ನಾಟಕ ಏಕೀಕರಣ. ಕನ್ನಡಿಗರು ಕರ್ನಾಟಕವನ್ನು ತ್ಯಜಿಸಿ ಹೊರನಾಡಿನಲ್ಲಿ ನೆಲಸುವ ಅವಶ್ಯಕತೆಯಿಲ್ಲ. ಪರಕೀಯರು ನಮ್ಮಲ್ಲಿಗೆ ಬಂದು ಕನ್ನಡ ನಾಡಿನ ಆರ್ಥಿಕ ಶೋಷಣೆ ಮಾಡುವದನ್ನು ತಪ್ಪಿಸಬೇಕು ಎಂದು ಮುಂತಾಗಿ ಹೇಳಿದರು. ಶ್ರೀ ಆರ್ ಕಲ್ಯಾಣಮ್ಮನವರು ಕನ್ನಡ ನಾಡಿನ ಏಳಿಗೆಯ ಬಗ್ಗೆ ಕೆಲ ಮಾತು ಹೇಳಿದರು. ಮುಖ್ಯ ಅತಿಥಿಗಳಾದ ಶ್ರೀಕೃಷ್ಣ ಕುಮಾರರು ಕನ್ನಡ ನಾಡಿನ ಆರ್ಥಿಕ ದುಸ್ಥಿತಿ ಕುರಿತು ಮಾತಾಡುತ್ತ ಕನ್ನಡ ನಾಡಿನ ನೈಸರ್ಗಿಕ ಸಂಪತ್ತನ್ನು ಅಭಿವೃದ್ಧಿಗೊಳಿಸದೆ ನಮಗೆ ಮುಕ್ತಿಯಿಲ್ಲೆಂದು ಹೇಳಿದರು. ಆಭಾರಮನ್ನಣೆ ಪೂಮಾಲೆ ಸಮರ್ಪಣೆಯಾಗಿ ಸಭೆ ಕೊನೆಗಂಡಿತು.

## ಮೈಸೂರು ಶಾಸನ ಸಭೆ

(೧೭ನೇ ಪುಟದಿಂದ)

ಸಭೆಗಳನ್ನು ಈ ವಿಷಯವದಲ್ಲಿ ವಿಚಾರಿಸಲಾಗದೆಂದೂ ಒಮ್ಮತದ! ಅರು ಪ್ರತಿನಿಧಿಗಳನ್ನಾಯ್ದು ಅವರ ಮುಂದಾಳ್ತನವನ್ನು ತಾವೆ ವಹಿಸಿ ಮೈಸೂರಿಗೆ ಬೇರಾದ ಸಂಸ್ಥಾನಕ್ಕೆ ಸಿಗದಂಥ ಪ್ರತಿಷ್ಠೆಯನ್ನು ಗಳಿಸಿ ಕೊಡುವದಾಗಿಯೂ ಹೇಳಿದರು.

ಹಳ್ಳಿಗಳಿಗೆ ಬಟ್ಟೆ ಪೂರೈಕೆ ವ್ಯಾಪಾರಿಗಳ ಮೂಲಕ ನಡೆದಿರುವದು ಅಸಮರ್ಪಕವಾಗಿದೆ ಯೆಂಬದನ್ನು ಚರ್ಚಿಸಲು ಕಾಂಗ್ರೆಸ್ಸಿನ ಎಸ್. ವಿ. ಕೃಷ್ಣಮೂರ್ತಿಯವರು ತಂದ ನಿಲುವಳಿ ಮಾತಿನಲ್ಲೆ ಮುಕ್ತಾಯವಾಯಿತು.

### ದಿವಾಣರ ಬಗ್ಗೆ ಅಸಂತೋಷ

ತಾ. ೯ ಕ್ಕೆ ಕಾಂಗ್ರೆಸ್ ಪಕ್ಷದವರು, ದಿವಾಣರ ಅಧಿವೇಶನ ಭಾಷಣ ಪ್ರಾರಂಭದಲ್ಲಿ ರಾಜಕೀಯ ಕಾರ್ಯಕರ್ತರಿಗೆ ಕೊಟ್ಟ ಎಚ್ಚರಿಕೆಯಿಂದ ಜನರಲ್ಲಿ ಅಸಂತೋಷ ನಿರಾಶೆಗಳು ಹುಟ್ಟಿವೆಯೆಂದು ಒಂದು ನಿಲುವಳಿ ತರಲು ಯತ್ನಿಸಿದರು ಆದರೆ ಬ್ರಿಟಿಶ ಪ್ರಾಂತಗಳ ಗವರ್ನರ, ವಾಯಿಸರಾಯರ ಭಾಷಣದ ಚರ್ಚೆ ಮಾಡಲು ಶಾಸನಸಭೆಗಳಿಗೆ ಅಧಿಕಾರವಿಲ್ಲವಾದಂತೆ ದಿವಾಣರ ಭಾಷಣವನ್ನು ಟೀಕಿಸಲು ಪ್ರತಿನಿಧಿ ಸಭೆಗೆ ಹಕ್ಕಿಲ್ಲವೆಂದು ದಿವಾಣರು ನಿಲುವಳಿಯನ್ನು ಕಿತ್ತುಹಾಕಿದರು.

ಸಭೆ ಇನ್ನೂ ಮುಂದೆ ಸಾಗಿದೆ.

## ಪ್ರಾಥಮಿಕ ಶಿಕ್ಷಕರ ಸಂಬಳ ಮುಂಬಯಿ ಸರಕಾರದ ಪ್ರಕಟನೆ

ಮುಂಬಯಿ ಸರಕಾರದವರು ಪ್ರಕಟನೆಯೊಂದನ್ನು ಹೊರಡಿಸಿ ಪ್ರಾಥಮಿಕ ಶಿಕ್ಷಕರ ಸಂಬಳದ ಪ್ರಮಾಣವನ್ನು ಗೊತ್ತುಪಡಿಸಿದ್ದಾರೆ. ಶಿಕ್ಷಕರಲ್ಲಿ ತರಬೇತಿಹೊಂದಿದ ಮತ್ತು ಹೊಂದದಿದ್ದ ಶಿಕ್ಷಕರೆಂದು ಎರಡು ವರ್ಗಗಳನ್ನು ಮಾಡಲಾಗಿದೆ. ತರಬೇತಿಹೊಂದದಿದ್ದ ಶಿಕ್ಷಕರಿಗೆ ೨೫—೧—೩೦ ರೂಪಾಯಿ ಸಂಬಳ ಪ್ರಮಾಣ ದೊರೆಯಬೇಕು. ತರಬೇತಿಹೊಂದಿದ ಶಿಕ್ಷಕರ ಸಂಬಳ ಪ್ರಮಾಣವನ್ನು ೩೦—೧—೫೦ ರೂಪಾಯಿಗಳು ಎಂದು ನಿರ್ಧರಿಸಲಾಗಿದೆ ತರಬೇತಿ ಹೊಂದಿದ ಶಿಕ್ಷಕರಲ್ಲಿ ನೂರಕ್ಕೆ ೧೫ ರಷ್ಟು ಶಿಕ್ಷಕರಿಗೆ ಹೆಚ್ಚಿನ ಗ್ರೇಡನ್ನು ಕೊಡಲಾಗುವದು ಈ ಶಿಕ್ಷಕರ ಸಂಬಳವು ೫೦—೨—೭೫ ರೂಪಾಯಿಗಳು ಎಂದು ನಿರ್ಧರಿಸಲಾಗಿದೆ. ೧೯೪೬ ಅಗಷ್ಟ ೧ ನೇ ತಾರೀಖಿನಿಂದ ಸಂಬಳದ ಹೊಸ ಪ್ರಮಾಣಗಳು ಜಾರಿಯಲ್ಲಿ ಬರುವವು. ಜೀವನದ ವೆಚ್ಚ ಹೆಚ್ಚಿಗಿರುವ ಇಲ್ಲವೆ ಬಾಡಿಗೆ ವಿಪರೀತವಾಗಿರುವ ಇಲ್ಲವೆ ಕೆಟ್ಟ ಹವೆಯ ಪ್ರದೇಶಗಳಲ್ಲಿ ದುಡಿಯುವ ಪ್ರಾಥಮಿಕ ಶಿಕ್ಷಕರಿಗೆ ಅಲ್ಲಿರುವಾಗ ಹೆಚ್ಚಿಗೆ ಭತ್ತೆ ಕೊಡಲಾಗುವದು. ಮುನಸಿಪಾಲಿಟಿ ಇದ್ದ ಊರುಗಳಲ್ಲಿ ಜೀವನ ವೆಚ್ಚ ಅಧಿಕವಿರುವದೆಂದು ಭಾವಿಸಿ ಅಲ್ಲಿಯ ಅಧಿಕಾರಿಗಳು ಶಿಕ್ಷಕನಿಗೆ ತಿಂಗಳ ೫ ರೂ. ಗಳಿಗೆ ಮಿಕ್ಕದಷ್ಟು ಭತ್ತೆಯನ್ನು ಕೊಡಬಹುದು. ಮುನಸಿಪಾಲಿಟಿಗಳಿಲ್ಲದ ಮತ್ತು ಲೋಕಲ್‌ಬೋರ್ಡಿನ ಅಧೀನದ ಇತರ ಗ್ರಾಮಗಳಲ್ಲಿ ಜೀವನದ ವೆಚ್ಚ ಅಧಿಕವಾಗಿದೆಂದು ಮನಗಾಣಿಸಿದರೆ ಅಲ್ಲಿಯ ಅಧ್ಯಕ್ಷರು ಶಿಕ್ಷಕರಿಗೆ ೫ ರೂಪಾಯಿ ಭತ್ತೆಯನ್ನು ಪ್ರತಿ ತಿಂಗಳ ಕೊಡಬಹುದು ಸ್ಥಳೀಯ ಸಂಸ್ಥೆಗಳ ಈ ಆರ್ಥಿಕ ಹೊಣೆಯನ್ನು ಸ್ವಲ್ಪ ಕಡಮೆ ಮಾಡುವದಕ್ಕಾಗಿ ಸರಕಾರದವರು ಗ್ರಾಂಟು ಕೊಡುವ ವಿಚಾರ ನಡೆಸಿದ್ದಾರೆಂದು ಮುಂತಾಗಿ ಪ್ರಕಟನೆಯಲ್ಲಿ ಬರೆಯಲಾಗಿದೆ.

## ಸಂಪಾದಕೀಯ

(೩ನೇ ಪುಟದಿಂದ)

ರಿಂದ ಬ್ರಿಟಿಶ್ ಸೈನ್ಯ ಹಿಂತೆಗೆದುಕೊಳ್ಳುವ ಸಂಬಂಧದಲ್ಲಿ ಜವಾಹರಲಾಲರು ಸುಮ್ಮನಿರುವರೆಂದು ಅವರ ಮೇಲೆ ಆರೋಪ. ಆದರೆ ಪಂಡಿತ ಜವಾಹರಲಾಲರು ಈ ಆರೋಪವನ್ನು ಅಲ್ಲಗಳೆದು ಖಂಡತುಂಡ ಉತ್ತರ ಕೊಟ್ಟಿದ್ದಾರೆ. 'ನಡುಗಾಲ ಸರಕಾರದ ಬಗ್ಗೆ ದ್ವೇಷಭಾವವನ್ನಿಟ್ಟುಕೊಂಡಿದ್ದಾರೆಂದು ಇದರಿಂದ ಕಂಡು ಬರುವದು. ಭಾರತದಲ್ಲಿಯ ವಾತಾವರಣವನ್ನು ಕದಡಿ ಐಕ್ಯಕ್ಕೆ ಬಾಧೆಯನ್ನುಂಟು ಮಾಡುವ ಉದ್ದೇಶದಿಂದಲೆ ಈ ದ್ವೇಷಪೂರ್ಣ ಹೊಣೆಗೇಡಿ ಭಾಷಣಗಳು ನಡೆದವು. ಜಾತೀಯ ಗಲಭೆಗಳನ್ನು ಹತ್ತಿಕ್ಕಲು ಬ್ರಿಟಿಶ್ ಸೈನ್ಯದ ಸಹಾಯ ನಮಗೆ ಬೇಕಿಲ್ಲ. ಅದಷ್ಟು ಬೇಗ ಅದನ್ನು ಹಿಂತೆಗೆದುಕೊಳ್ಳಹಚ್ಚುವದು ನಮ್ಮ ಈಗಿನ ಧೋರಣವಾಗಿದೆ. ಅವರನ್ನಿಲ್ಲಿ ಇಟ್ಟುಕೊಳ್ಳುವದು ನಮಗೆ ನಾಚಿಕೆಗೇಡು. ನಮ್ಮೀ ಬೇಡಿಕೆಗೆ ಬ್ರಿಟಿಶ್ ಟೋರಿಗಳು ಬೆಂಬಲ ಕೊಟ್ಟು ನಮ್ಮೀ ಕಾರ್ಯದಲ್ಲಿ ನೆರವಾಗಬೇಕೆಂದು' ಮುಂತಾಗಿ ಜವಾಹರರು ಸ್ಪಷ್ಟಪಡಿಸಿದ್ದಾರೆ. ಟೋರಿಗಳ ಈ ಬಗೆಯ ದ್ವೇಷಭಾವನೆಯಿಂದ ಹಿಂದುಸ್ತಾನಕ್ಕೂ ಹಿತವಾಗದು ಬ್ರಿಟನ್ನಿನ ಉದ್ದಿಷ್ಟವೂ ಸಾಧಿಸದು. ಆದುದರಿಂದ ಬ್ರಿಟಿಶ ಟೋರಿಗಳು ತಮ್ಮೀ ಪ್ರತಿಗಾಮಿ ಧೋರಣ ಬಿಟ್ಟುಗೊಟ್ಟು ಕೂಲಿಕಾರ ಸರಕಾರದಗೂಡ ಸಹಕರಿಸಿ ಹಿಂದುಸ್ತಾನದ ಬೇಡಿಕೆಯನ್ನು ಅದಷ್ಟು ಬೇಗ ಪೂರೈಯಿಸಬೇಕೆಂದು ಸೂಚಿಸುತ್ತೇವೆ.

# ಪ್ರೇ ಮ ಪ ತ್ರ ಗ ಳು

( ೨ನೇ ಪುಟದಿಂದ )

ರಸ ವಿರಸ. ನನ್ನ ಕವಿತೆಯ ಅಭಿಮಾನಿ ದೇವತೆ ನೀನೆ! ಪ್ರೇಮದ ಬಿಸಿಲುಮಳೆಯನ್ನು ಕರೆದು ಉದ್ಧರಿಸು! ನನ್ನ ಆಸೆಯ ಅಗಸದಲ್ಲಿ ದಯೆಯ ಮುಂಚನ್ನು ಮೂಡಿಸು!..." ಹೀಗೆಬಂದಲ್ಲ, ಎರಡಲ್ಲ. ಸಾವಿರ ನುಡಿಗಳು ಆ ನೂರೆಂಟು ಪತ್ರಗಳ ಮೂಕ ಮಾತು. ಕವಿಯ ಪ್ರೇಮಕ್ಕೆ ಗಾಯತ್ರಿಯು ತಲೆದೂಗಿದಳು. ಆದರೆ ಆ ದುರಂತ ಚಿತ್ರವು ಕಣ್ಣ ಮುಂದೆ ಸುಳಿಯಿತು. ದೂರದಲ್ಲಿ ಬೆದರಿದ ಭಿಕ್ಷುಕನಂತೆ ಓಡಿ ಹೋಗುವ ಕವಿಯು ಕಂಡನು.

ಅದರ ಕೆಳಗೆ ಧನಂಜಯನ ಇನ್ನೊಂದು ಗಂಟು. ಗಾಯತ್ರಿಯು ಕೈಗೆ ತೆಗೆದುಕೊಂಡಳು. ಬಂಗಾರದ ಹೊಳಹಿನ ಬಣ್ಣಬಣ್ಣದ ಅಂಚಿನ ಕಾಗದ. ಹೃದಯದೊಳಗಿನ ರಕ್ತಮೌಕ್ತಿಕದಂತಹ ಶಬ್ದಶಬ್ದಕ್ಕೆ ಹೊಂದಿಕೊಂಡು ಓಡುವ ಅರ್ಥ. ಅರ್ಥವನ್ನು ಹಿಂಬಾಲಿಸಿಕೊಂಡು ಬರುವ ಭಾವನೆ. ಭಾವನೆಯ ಕುದಿತದಿಂದ ರಸಗಟ್ಟಿಯಾದ ಪ್ರೇಮತರಂಗ ಗಂಗೆ. ತರಂಗ ಮಾಲೆಯಲ್ಲಿ ತೂಗಾಡುವ ಧನಂಜಯನ ಅಸ್ತಿತ್ವ ಅಸ್ತಿತ್ವದ ಸುತ್ತು ಪ್ರೇಮಗಾನ. ಗಾನವನ್ನು ಬಳಸಿಕೊಂಡ ದೌಲತ್ತಿನ ರಂಗಮಂಟಪ. ಮಂಟಪದ ಅಕ್ಕಪಕ್ಕದಲ್ಲಿ ಮಗಮಗಿಸುವ ವಾಸನೆ. ಗಾಯತ್ರಿಯು ಪತ್ರದಲ್ಲಿ ತಲ್ಲೀನಳಾದಳು. ಎಲ್ಲ ಪತ್ರಗಳು— "ಗಾಯತ್ರೀ, ಜೀವನವು ಒಂದು ಅಮೃತಬಟ್ಟಲವು. ಕಷ್ಟ–ದುಃಖಗಳ ಬಟ್ಟಲ ಮೇಲೆ ಕುಳಿತ ನೊಣ–ಇರುವೆಗಳು. ಅವೆಲ್ಲ ಅಗಂತುಕ. ಹೊಡೆದೋಡಿಸಬಹುದು. ನಿನ್ನ ಸೌಂದರ್ಯವನ್ನು ಕುಡಿದು ಕಣ್ಣು ತೃಪ್ತಿಗೊಂಡಿವೆ. ನನ್ನ ಜೀವರಸವನ್ನು ಹಣತೆಯಲ್ಲಿ ತುಂಬಿ ನಿಂತಿರುವೆ. ನಂದಾದೀಪವಾಗಿ ಪ್ರಜ್ವಾಲಿಸಬೇಕೆಂದಿರುವೆ. ನನ್ನ ದೌಲತ್ತು ಇದಕ್ಕೆ ಸಹಕಾರಿಯಾಗಿ ನಿಂತು ಬಾಜಿಸಬೇಕೆಂದು ಹಾತೊರೆದಿದೆ. ನಿನ್ನ ಆಜ್ಞೆಯ ದಾರಿಯನ್ನು ಕಾಯುತ್ತಿರುವೆ. ನಮ್ಮ ಏಳು ಜನ್ಮಗಳು ಉಣ್ಣಬಹುದೆಂದು ಎನಿಸಿದರೂ ಅದನ್ನು ನಾನು ತುಚ್ಛವೆಂದು ತಿಳಿದಿರುವೆ. ಗಾಯತ್ರೀ, ನಿನ್ನ ಪ್ರೇಮ ನನ್ನ ಉದ್ದೇಶ, ಜೀವನದ ತಾರಕ—ಮಾರಕ ಮಂತ್ರ!..." ಎಂದು ಬಣ್ಣಬಣ್ಣ ನೆಯಬಾಯನ್ನು ಬಿಟ್ಟು ಮೂಕ ಮಾತುಗಳಿಂದ ನೂರೆಂಟು ಪತ್ರಗಳು ಒಡನುಡಿದವು. ಗಾಯತ್ರಿಯು ತಲೆದೂಗಿದಳು. ಆದರೆ ಆ ವಿಪರೀತ ಪ್ರಜ್ಞೆ ಕಣ್ಣ ಮುಂದೆ ಸುಳಿಯಿತು. ಧನಂಜಯನು ಬೆದರಿದ ನಾಯಿಯಂತೆ ಓಡಿದನು.

ಅದರ ಕೆಳಗೆ ಶಿಶುಮಾರನ ಪತ್ರಗಳು. ಕೈಗೆ ತೆಗೆದುಕೊಂಡಳು.

ಪತ್ರಗಳೆಲ್ಲ ಸಾದಾ. ಧನಂಜಯನ ಪತ್ರಗಳಂತೆ ಆಡಂಬರವಿರಲಿಲ್ಲ. ಮಗಮಗ ವಾಸನೆಯನ್ನು ಕೂಡಿದವುಗಳಲ್ಲ. ಶುಭ್ರವಾದ ಆಗಸದಂತಹ ಬೆಳ್ಳಂಬೆಳ್ಳನ್ನ ಕಾಗದ. ನಕ್ಷತ್ರಗಳಂತೆ ಅಕ್ಷರಗಳು. ನಕ್ಷತ್ರರಾಶಿಗಳಂತೆ ಬಳಸಿ ನಿಂದ ಶಬ್ದಗಳು. ನಡುನಡುವೆ ಹುಣ್ಣಿಮೆಯ ಚಂದ್ರನಂತಹ ದುಂಡನ್ನ ಪ್ರೇಮ. ಗಾಯತ್ರಿಯು ಒಂದೆರಡನ್ನು ಓದಿದಳು. ಎಲ್ಲವು–"ಗಾಯತ್ರೀ, ಜೀವನವು ಮುಂಜಾವಿನಲ್ಲಿ ಅರಳಿದ ಮಲ್ಲಿಗೆಯ ಹೂವಿನಂತೆ ಕೋಮಲವಾದುದು, ಗಂಧಭರಿತವಾದುದು. ವಿಶ್ವಜೀವನದಲ್ಲಿ ನಮ್ಮ ಬಾಳು ಅತ್ಯಲ್ಪ. ಈ ಅತ್ಯಲ್ಪ ಸಮಯದಲ್ಲಿ ಹೂವಿನಲ್ಲಿಯ ಬಂಡನ್ನುಣ್ಣುವ ಭ್ರಮರಗಳಂತೆ ಜೀವರಸವನ್ನು ಕುಡಿಯುವ. ಅಮರರಾಗಿ ನಿಂತು ಜೀವಸಾಫಲ್ಯ ಗಾನವನ್ನು ಹಾಡುವ. ನಾಳಿನ ಚಿಂತೆಯನ್ನು ಭವಿಷ್ಯಕ್ಕೆ ಬಿಡುವ. ಹಿಂದೆ ನೂರು ರಾಜ್ಯಗಳು ಹುಟ್ಟಿದವು, ಅಳಿದುವು. ನಾವು ಅವುಗಳನ್ನು ದಾಟಿ ಬಂದಿರುವೆವು. ನಾಳೆ ನೂರು ಹುಟ್ಟಬಹುದು. ಅಳಿಯಬಹುದು. ಅದರ ಮೊದಲು ನಿಂತಿರುವೆವು. ನಮ್ಮ ಪ್ರೇಮ ಜ್ಯೋತಿಗೆ ಹಿಂದಿನದೂ ಮುಂದಿನದೂ ಬಂಧನಕಾರಿಯಲ್ಲ. ವರ್ತಮಾನವನ್ನು ಕಂಡು ಬೆಳಗುವ. ನಿರ್ಮಲ ಭ್ರಮರಗಳಂತೆ ಆಡುವ ನಲಿಯುವ. ಬಾಳದೀವಟಗೆಯನ್ನು ಎತ್ತಿಹಿಡಿವ. ಕಾಲ ನಮ್ಮ ರೂಪನ್ನು ಹಿಂಡಲು ವಾರ್ಧಕ್ಯರೂಪಿ ಗುಲಾಮನನ್ನು ಅಟ್ಟಿರುವ. ಅವನ ಬುಟ್ಟಿಗೆ ಸಿಕ್ಕುವ ಮೊದಲು ನಾವು ಕೂಡುವಾ. ಗಾಯತ್ರಿ ಹಾಲಿಗೆ ಸಕ್ಕರೆಯನ್ನು ಬೆರಸು ..." ಇಷ್ಟನ್ನು ನೂರಾರು ಪತ್ರ ಮುಖಗಳು ನುಡಿದವು. ಗಾಯತ್ರಿಯು ಪತ್ರವನ್ನು ನೆತ್ತಿಗೆ ಒತ್ತಿಕೊಂಡಳು. ಆದರೆ ಶಿಶುಮಾರನ ಕನಸಿನ ನೋಟವು ಸುಳಿಯಿತು. ಕಣ್ಣು ಪಿಳುಕಿಸಿ ನೋಡಲು ಕಾಮನು ಕಾಣದಾದನು.

ವಿಷ್ಣುಚರಣನನ್ನು ಮದುವೆಯಾದರೆ ಬಾಳುವೆ ಗೌರವಯುತವಾಗಿ ನಡೆಯುವದೆಂದೂ ಧನಂಜಯನನ್ನು ಮದುವೆಯಾದರೆ ದೌಲತ್ತಿನಿಂದ ನಡೆಯುವದೆಂದೂ ಶಿಶುಮಾರನನ್ನು ಮದುವೆಯಾದರೆ ಆನಂದಮಯವಾಗಿ ಸಾಗುವದೆಂದೂ ತುಂಬಾ ಅರಿತಿದ್ದಳು. ಈ ಮೂವರಲ್ಲಿ ಇವನೇ ಯೋಗ್ಯನೆಂದಾಗಲಿ, ಇವನಿವನು ಅಯೋಗ್ಯನೆಂದಾಗಲಿ ನಿರ್ಣಯಿಸಲು ಶಕ್ತಿ ಸಾಲದಾಯಿತು. ಒಬ್ಬನಲ್ಲಿಯ ಅನುಕೂಲಶಕ್ತಿ ಇನ್ನೊಬ್ಬನಲ್ಲಿ ಅಧಿಕವಾಗಿರದಿದ್ದರೂ ಅಲ್ಪಸ್ವಲ್ಪವಾಗಿ ಕಂಡು ಅವರ ವ್ಯಕ್ತಿತ್ವವು ತನಗೆ ಆಕರ್ಷಕವೆಂದು ಮನಗಂಡಿದ್ದಳು. ಜೀವವು ಮೂರು ಕಡೆಗೆ ಹರಿದುಕೊಂಡು ಹೋಗುವದೇ? ಎಂದು ಶಂಕಿಸಿದಳು. ಆದರೆ ಹಾಗಾಗಗೊಡೆನೆಂದು ನಿರ್ಧರಿಸಿದ್ದಳು. ಮೂರು ಹೂಬಾಣಗಳಿಗೆ ಸಿಕ್ಕ ಜಿಂಕೆಯ ಮರಿಯಂತೆ ಅನೇಕದಿನ ಸಂತಪಿಸಿದಳು. ಆದರೆ ಇಂದು ಮೂವರಲ್ಲಿ ತನ್ನೆಡೆಗೆ ಜಯಶಾಲಿಯಾಗಿ ಧಾವಿಸಿಬಂದವನೇ ಯೋಗ್ಯನು. ಅವರು ತಮ್ಮ ಶಕ್ತಿಯನ್ನು ತಾವೇ ನಿರ್ಧರಿಸಲಿ. ನಾನು ಅವನನ್ನು ಆನಂದದಿಂದ ಬರಮಾಡಿಕೊಳ್ಳುವೆ. ಆ ಜಯಶಾಲಿಯು ನನ್ನ ಕೈಹಿಡಿದು ಮುದ್ದಿಡಲಿ. ಎಂದು ಗೊತ್ತು ಮಾಡಿಕೊಂಡಳು. ಮನಸು ಪುಲಕಿತಗೊಂಡಿತು. ಮುಖದಲ್ಲಿ ಒಂದು ಮಿಂಚಿನ ತಿಳಿಹೊಳೆ ಹರಿಯಿತು. ತಲೆಯಲ್ಲಿ ಮಾತ್ರ ಮೂವರು ಗಾಳಿಯ ಕೋಳಿಯಂತೆ ಸುತ್ತುವರೆದು ಸುತ್ತುತ್ತಿದ್ದರು. ತನ್ನನ್ನೇ ಕಣ್ಣಿಟ್ಟು ನೋಡುವಂತೆಯೂ ಕಂಡಳು ಅದರೂ ಇದೆಲ್ಲ ಅವಳಿಗೆ ಆನಂದ.

ತನ್ನ ವಿದ್ಯಾಲಯದ ವೇಳೆಯಾಯಿತು. ಪುಸ್ತಕಗಳನ್ನು ತೆಗೆದುಕೊಂಡು ನಡೆದಳು. ದಿನವೂ ಅದೇ ದಾರಿಯನ್ನು ತುಳಿಯುವಳು. ಅಕ್ಕಪಕ್ಕದ ಅವೇ ಮನೆಗಳನ್ನು ಕಾಣುವಳು. ಆದರೆ ಇಂದು ಹೊಸದು. ಪ್ರತಿಯೊಂದು ಮನೆಯಲ್ಲಿ ಉತ್ಸಾಹದ ಕಿಲಕಿಲರವ. ದಾರಿಗುಂಟ ಸಂತಸದ ಹೊಳೆ. ಈ ಉತ್ಸಾಹದ ಸೆಳವಿನಲ್ಲಿ ತೇಲಿಕೊಂಡು ವಿದ್ಯಾಲಯವನ್ನು ಮುಟ್ಟಿದ್ದನ್ನೇ ಮರೆತಳು.

ವಿದ್ಯಾಲಯದ ಹೆಬ್ಬಾಗಿಲಿನಲ್ಲಿ ಮುಗುಳುನಗೆಯ ಶಿಶುಮಾರನು ಕಂಡನು. ಗಾಯತ್ರಿಯು ಅವನ ಮುಖದಲ್ಲಿಯ ರತಿಪತಿಯ ಪ್ರಸಾದ ಗಾಂಭೀರ್ಯವನ್ನು ಕಂಡು ಮನದಲ್ಲಿ ಕೊಂಡಾಡಿ ಮುಂದೆ ಸಾಗಿದಳು. ಕೋಣೆಯ ಬಾಗಿಲಲ್ಲಿ ಧನಂಜಯನನ್ನು ಕಂಡಳು. ಅವನ ಹಣೆಯಲ್ಲಿ ಮಿರುಗಿಟ್ಟು ಮೂಡುವ ಧನರೇಷೆಗಳನ್ನು ಕಂಡು ಸಂತಸಬಟ್ಟು ಮುಂದುವರಿದಳು. ವರ್ಗದಲ್ಲಿ ವಿಷ್ಣುಚರಣನ ಸಾತ್ವಿಕ ತೇಜದ ಮುಖಮಂಡಲವನ್ನು ಕಂಡಳು. ಮುಖದ ಮೇಲೆ ಮಂಜುಲವಾಗಿ ಹೊಳೆವ ಸರಸ್ವತಿಯ ನೃತ್ಯ—ಲಾಸ್ಯದ ಸುಳುಸುಳಿಯ ಭಾವರೇಖೆಗಳನ್ನು ಕಂಡು ಮೋಹಗೊಂಡಳು. ವರ್ಗದ ಮಹೋಪಾಧ್ಯಾಯರು ಬಂದರು. ಭಕ್ತಿಯನ್ನು ಸಲ್ಲಿಸಲು ಎದ್ದು ನಿಂತರು.

ಅಂದು ಶಾಸ್ತ್ರೀಯವಿಷಯದ ಒಂದು ಪ್ರಯೋಗ.

ಪ್ರಯೋಗವು ಯಶಃಪ್ರದವಾಗಿ ಸಾಗಿತು. ಬಿಡುವಿನ ಗಂಟೆ ಬಾರಿಸಿತು. ಎಲ್ಲರು ಕೆಳಗಿನ ಕೋಣೆಗೆ ಹೊರಟರು. ಗಾಯತ್ರಿಯೂ ಹೊರಗೆ ಬಂದಳು. ಗೆಳತಿಯರು ಏನೋ ಪಿಸುಗುಟ್ಟುತ್ತ ವರ್ಗದಲ್ಲಿ ನಿಂತರು. ಉಳಿದ ವಿದ್ಯಾರ್ಥಿಗಳು ಸಾಲುಗೊಂಡು ಹೊರಬಿದ್ದರು.

ಗಾಯತ್ರಿಯ ಮನಸು ಇಂದು ಹರ್ಷೋನ್ಮಾದಭರಿತ. ತನ್ನ ನಿರ್ಧಾರದ ಪರೀಕ್ಷೆಯಲ್ಲಿ ಯಾವನು ಉತ್ತೀರ್ಣನಾಗುವನೆಂದು ಹವಣಿಕೆಯನ್ನು ಗುಣಿಸುತ್ತ ನಡೆದಿದ್ದಳು. ಇವನೇ ಪತಿಯಾಗಲೆಂದು ಆಶಿಸಿದವಳಲ್ಲ. ಯಾವನಾದರೂ ಸರಿ. ಅವನನ್ನು ಭಕ್ತಿಭಾವದಿಂದ ಅಪ್ಪಿ ಒಪ್ಪಲು ಸಿದ್ಧ. ೫-೬ ವರುಷದ ಮನಸಿನ ಭಾರ ಇಂದು ಹಗುರು. ಗಾಳಿಯಲ್ಲಿ ನಡೆದಾಡಿದಂತೆ ಭಾವನೆ. ಸಂತೋಷದ ದಾರಿಯಲ್ಲಿ ಹೆಜ್ಜೆ ಇಟ್ಟಂತೆ ಇಹದ ಮರೆವು.

ಮೆಟ್ಟಲನ್ನು ಇಳಿದು ತಮ್ಮ ಕೋಣೆಗೆ ಹೋಗಬೇಕು.

ವಿದ್ಯಾರ್ಥಿಗಳು ಮುಂದಾಗಿ ಇಳಿಯಹತ್ತಿದರು. ಗಾಯತ್ರಿಯು ತನ್ನ ಸರದಿಯನ್ನು ನಿರೀಕ್ಷಿಸಿ ಇಳಿಯಹತ್ತಿದಳು. ನಾಲ್ಕಾರು ಮೆಟ್ಟಲು ಇಳಿದಿರಬೇಕು. ಕಲ್ಪನೆಯ ಕಡಲಲ್ಲಿ ಮುಂದೋಡುವ ನೌಕೆಯನ್ನು ಕಾಲುಗಳು ಅನುಸರಿಸಿದವೋ ಏನೋ? ಮೆಟ್ಟಲು ತಪ್ಪಿ ಧಾಡಿರೆಂದು ಬಿದ್ದಳು. ಸಪ್ಪಳವು ಎಲ್ಲರನ್ನು ಬಿಗಿದು ನಿಲ್ಲಿಸಿತು. ಗಾಯತ್ರಿಯು ಬಿದ್ದಳು! ಓ!! ಎಂದು ಎಲ್ಲರೂ ಕೂಗಿದರು. ಪ್ರಜ್ಞಾಶೂನ್ಯಳಾಗಿ ಬಾಯಿಂದ, ತಲೆಯಿಂದ ರಕ್ತವನ್ನು ಹರಿಸುತ್ತ ಹಾಗೇ ಬಿದ್ದಳು. ವಿದ್ಯಾರ್ಥಿಗಳು ಸುತ್ತುವರಿದರು. ಗಾಬರಿಯಾದರು. ಅಸಹಾಯ ಸ್ಥಿತಿಯಲ್ಲಿ ಕ್ರಿಯಾಶೂನ್ಯರಾಗಿ ನಿಂತರು. ಅದೇ ಶಿಶುಮಾರನ ಮುಖದಲ್ಲಿ ನಿಸ್ತೇಜ! ಧನಂಜಯನ ಬಾಯಲ್ಲಿ ದರಿದ್ರತೆ! ವಿಷ್ಣುಚರಣನ ಕಣ್ಣಲ್ಲಿ ವಿರಸಚಿಂತನ! ಮುಂಗಾಣದವರಾಗಿ "ಹೆಲ್ಪ...ಹೆಲ್ಪ...ಲೇಡೀಜ ಹೆಲ್ಪ" ಎಂದು ಕೂಗಿದರು.

ರಹಿಮನು ಗದ್ದಲದೊಳಗಿಂದ ಧಾವಿಸಿ ಬಂದನು. "ಎಲ್ಲಿ! ಎಲ್ಲಿ ಗಾಯತ್ರಿ!" ಎಂಬ ಮಾತಿನ ಸಂಗಡಲೆ ಅವಳನ್ನು ಗೊಂಬೆಯಂತೆ ಎತ್ತಿ ಮೆಟ್ಟಲೇರಿದನು. ಸಾಯನ್ಸ ಕೋಣೆಗೆ ತಂದನು. ಉದ್ದವಾದ ಟೇಬಲ್ಲಿನ ಮೇಲೆ ಮಲಗಿಸಿ ರಕ್ತವನ್ನು ಒರಸುತ್ತ ಮೈ-ಕೈ ನೇವರಿಸಹತ್ತಿದನು. ಲೇಡೀಜರು ಬಂದು ರಹಿಮನಿಗೆ ಸಹಾಯಕರಾಗಿ ನಿಂತರು.

ಕೂಡಿದವರೆಲ್ಲರು ಏನಾಯಿತೆಂದು ಸಾವಿರ ಕಂಠದಿಂದ ಕೇಳಿದರು. ಕವಿಯು ವರ್ಣಿಸಿ ಹೇಳಿ, ಹೇಳಿ ತನ್ನ ಪ್ರತಿಭೆಯನ್ನು ಕಳೆದುಕೊಂಡನು. ಧನಂಜಯನು ಬಡವನಾದನು. ಶಿಶುಮಾರನು ಅಷ್ಟಾವಂಕನಾದನು.

ಗಾಯತ್ರಿಗೆ ಇನ್ನೂ ಎಚ್ಚರವಿಲ್ಲ. ವಿದ್ಯಾಲಯದ ಹಿರಿ-ಕಿರಿಯರು ಅರಯಿಕೆಯಲ್ಲಿ ತೊಡಗಿದರು. ರಹಿಮನು ಮುಂದುವರಿದು ಡಾಕ್ಟರರನ್ನು ಕರೆತಂದನು. ಉಪಚಾರವಾಯಿತು, ತಲೆಗೆ ಪಟ್ಟಿಯನ್ನು ಕಟ್ಟಿದರು. ಡಾಕ್ಟರರು "ಮನೆಗೆ ಕಳಿಸಿರಿ" ಎಂದು ಆಜ್ಞಾಪಿಸಿದರು. ರಹಿಮನು ತನ್ನ ಮೋಟಾರಿನಲ್ಲಿ ಮನೆಗೆ ಕರೆದುಕೊಂಡು ಹೋದನು. ಒಬ್ಬಿಬ್ಬ ಲೇಡೀಜರು ಗಾಯತ್ರಿಗೆ ಸಹಾಯಕರಾಗಿ ನಡೆದರು.

ಗಾಯತ್ರಿಯು ಗುಣಮುಖಿಳಾಗಲು ಬಹಳ ದಿನ ಹಿಡಿಯಲಿಲ್ಲ. ಈಗ ಎದ್ದು ಓಡಾಡುವಳು ಆದರೆ ತಲೆಯ ಗಾಯ ಮಾತ್ರ ಇನ್ನೂ ಮಾಸಿಲ್ಲ.

ಇಷ್ಟು ದಿನಗಳ ವರೆಗೆ ರಹಿಮನು ದಿನವೂ ಬಂದು ಹೋಗುತ್ತಿದ್ದನು. ಡಾಕ್ಟರರ ಸಲಹೆಯನ್ನು ಹೇಳುತ್ತಿದ್ದನು. ಪಥ್ಯ—ಪಾನೀಯಗಳನ್ನು ಲಕ್ಷಪೂರ್ವಕವಾಗಿ ನೋಡುತ್ತಿದ್ದನು. ರಹಿಮನ ಸಹಾಯಕ್ಕೆ ಸಾವಿರ ಧನ್ಯತೆಗಳನ್ನು ಸಲ್ಲಿಸಿದರೂ ಗಾಯತ್ರಿಗೆ ತೃಪ್ತಿಯಿಲ್ಲ.

ಗಾಯತ್ರಿಯ ತಂದೆ—ತಾಯಂದಿರು ರಹಿಮನ ಉಪಕಾರವನ್ನು ಎಷ್ಟು ಕೊಂಡಾಡಿದರೂ ಕಡಿಮೆಯೆ.

ಒಂದಿನ ಗಾಯತ್ರಿಯು ತನ್ನ ಪುಸ್ತಕದ ಕಪಾಟು ಕಿತ್ತುಹಾಕುತ್ತ ಕುಳಿತಿದ್ದಳು ಕೈಗೆ ಆ ಮೂವರ ಪ್ರೇಮಪತ್ರಗಳ ಗಂಟು ಅಕಸ್ಮಾತ್ತಾಗಿ ಸಿಕ್ಕವು. ಅವುಗಳ ಮೇಲಿನ ಧೂಳಿಯನ್ನು ಝಾಡಿಸಿ ಕೈಯಲ್ಲಿ ತೆಗೆದುಕೊಂಡಳು. ರಹಿಮನು ಬಂದು– "ನಮಸ್ತೆ ಗಾಯತ್ರೀ" ಎಂದನು. "ನಮಸ್ತೇ ರಹಿಮತಖಾನಜೀ" ಎಂದುಸ್ವಾಗತಿಸಿದಳು.

— ಅವೇನು? ಎಂದು ಕೂಡ್ರುತ ಕೇಳಿದನು.

— ಪ್ರೇಮಪತ್ರಗಳು, ಎಂದು ಕೈಗೆ ಕೊಟ್ಟಳು.

— ಪ್ರೇಮ ಪತ್ರಗಳು?

— ಅಹುದು ನೀವು ಓದಬಹುದು.

ರಹಿಮನು ಕೈಗೆ ತೆಗೆದುಕೊಂಡು ಒಂದೊಂದಾಗಿ ಓದಿದನು.

— ಇವೆಲ್ಲ ಯಾರವು? ವಿಷ್ಣುಚರಣನವೇ? ಎಂದು ಕೇಳಿದನು.

— ಒಂದು ಗಂಟು ವಿಷ್ಣುಚರಣನದು, ಮತ್ತೊಂದು ಧನಂಜಯನದು, ಇದು ಶಿಶುಮಾರನದು, ಎಂದು ನಕ್ಕಳು.

— ನನಗೆ ಹೇಳಿರಲಿಲ್ಲವಲ್ಲ ಗಾಯತ್ರೀ ಈ ವರೆಗೂ.

— ಹೇಳುವ ಕಾರಣವೇನು?

— ಶಬ್ದದಿಂದ ಪ್ರೇಮವನ್ನು ಅಳೆಯುವವಾದರೆ ನಾನು ಹೀನ.

— ಶಬ್ದದಿಂದ ನೀವು ಹೀನರೆಂದು ಕೃತಿಯಿಂದ ಸಿದ್ಧವಾಗಿದೆ. ಇಬ್ಬರು ಗಟ್ಟಿಯಾಗಿ ನಕ್ಕರು.

— ಒಂದು ಕೆಲಸವನ್ನು ಮಾಡಬೇಕು ರಹಿಮತಖಾನ ಸಾಹೇಬರೇ.

— ಆಜ್ಞೆ

— ಅಲ್ಲ......ವಿನಂತಿ.

— ಅಂದರೆ ಆಜ್ಞೆ, ರಾಣಿ!

— ಈ ಪತ್ರಗಳನ್ನು ಅವರಿಗೆ ವಿನಯದಿಂದ ಮುಟ್ಟಿಸಬೇಕು.

— ಆಗಬಹುದು.

— ಇನ್ನು ಮೇಲೆ ನೀವು ಏನಾದರು ಆಜ್ಞೆಯನ್ನು ಕೊಡಬಹುದೇ! ರಾಣಿಯು ಸಿದ್ಧಳಿರುವಳು.

Reg. No. B. 3148

LICENCE No 3
Licenced to Post without Prepayment

KARMAVEER 14-10-46



ಜ್ಯೋತಿಷಿ:-ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ

# ಅಕ್ಟೋಬರ ೧೪ ರಿಂದ ೨೦ ರ ವರೆಗೆ

## ಮೇಷ

ನಿಮ್ಮ ಮತ್ತು ಹೆಂಡತಿಯ ಪ್ರಕೃತಿ ಅನುಕೂಲ. ಆದರೆ ಪ್ರಾಪಂಚಿಕ ತೊಂದರೆ ಹೆಚ್ಚುವಂಥ ಸಂಗತಿ ಮೇಲಿಂದ ಮೇಲೆ ಸಂಭವಿಸಿ ಜೀವನವು ಹೇಯವೆನಿಸುವ ಸರತಿ ಬರುವದು. ಅನೇಕರು ಅಕ್ಕಸತನದಿಂದ ಕೆಟ್ಟ ಸಂಗತಿಗಳ ಬಗ್ಗೆ ನಿಮ್ಮ ಸಂಬಂಧವಿದೆಂದು ಸುಳ್ಳುಸುಳ್ಳೇ ಭಾಸಮಾಡುವಂತೆ ಪ್ರಯತ್ನಿಸುವರು. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಉತ್ತಮ. ಲಾಭ ಅಂದಾಜಿನಷ್ಟೆ ಆದರೆ ಅದು ಆಗಬೇಕಾದರೆ ರಸಕಸಿ ಬಹಳ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ವಿಜಯದ ಚಿನ್ಹಗಳು ಕಂಡು ಬರುತಿದ್ದರೂ ಪ್ರತ್ಯಕ್ಷ ಯಶಸ್ಸು ಅನಿರ್ಣೀತ. ಮಿತ್ರರಲ್ಲಿ ಸ್ವಲ್ಪ ವಿರೋಧ. ಪ್ರವಾಸಾದಿ ಕೆಲಸ ಅನುಕೂಲ. ಅಶ್ವಿನಿಯು ೪ ನೆ ಮತ್ತು ಭರಣಿಯು ಮೊದಲನೆ ೩ ಚರಣಗಳಿಗೆ ತೊಂದರೆ ಹೆಚ್ಚು. ತಾ. ೧೫, ೧೬, ೨೦ ಅನುಕೂಲ.

## ವೃಷಭ

ಪ್ರಕೃತಿ ಅನುಕೂಲ. ಆದರೆ ಹೆಂಡತಿ ಮತ್ತು ಮಕ್ಕಳ ಸುಖದಲ್ಲಿ ಅನಪೇಕ್ಷಿತ ಕಾರಣಗಳಿಂದ ಬಹಳ ವಿರಸ. ಉದ್ಯೋಗದಲ್ಲಿ ಸಾಹಸಮಾಡುವ ದೊಡ್ಡ ಪ್ರಯತ್ನ. ಪ್ರತಿಷ್ಠೆಯಲ್ಲಿ ಒಳಕು ಕೆಡಕು ಲೋಕಮತ ಅಷ್ಟೆ. ಆದರೆ ಲಾಭ ಬಹಳ ಕಡಮೆ. ಅದು ಬೇಗನೆ ಆಗುವ ಖಾತ್ರಿಯಿಂದ ಮನಸ್ಸು ಸ್ವಸ್ಥ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲತೆ. ಶತ್ರುಗಳಿಗಿಂತ ಮಿತ್ರರದೆ ತೊಂದರೆ ಹೆಚ್ಚು. ಪ್ರವಾಸ ಮತ್ತು ಭೆಟ್ಟಿ ಪತ್ರವ್ಯವಹಾರಕ್ಕಿಂತ ಅನುಕೂಲ. ಕೃತ್ತಿಕೆಯ ೪ ನೆ ಮತ್ತು ರೋಹಿಣಿಯು ಮೊದಲನೆ ೩ ಚರಣಗಳಿಗೆ ತೊಂದರೆ ಹೆಚ್ಚು. ತಾ. ೧೬, ೧೭, ೧೮ ಅನುಕೂಲ.

## ಮಿಥುನ

ಪ್ರಕೃತಿ ಮತ್ತು ಸ್ತ್ರೀ ಸುಖ ಅನುಕೂಲ. ಆದರೆ ಎಲ್ಲ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆ ವಿಪರೀತ. ಖರ್ಚು ಕಡಮೆ ಮಾಡಬೇಕೆಂಬ ಪ್ರಯತ್ನದಲ್ಲಿ ಅದು ಮತ್ತಷ್ಟು ಹೆಚ್ಚುವ ಪ್ರಸಂಗ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಆದರೆ ಆ ಮಾತು ಆಗುವ ವರೆಗೆ ವಿಪರೀತ ತೊಂದರೆ, ಭಾರವಾದ ವೆಚ್ಚ. ಪರಸ್ತ್ರೀಯತ್ತ ದೃಷ್ಟಿ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲತೆ. ಆದರೆ ಪ್ರತಿಪಕ್ಷವೂ ಬಹಳ ಡೌಲಿನಲ್ಲಿ. ಕೆಲವೊಂದು ವಿಶಿಷ್ಟ ದೈವಿಕ ಕೃತ್ಯಗಳು. ಆಸ್ತಿಯಲ್ಲಿ ಸ್ವಲ್ಪ ಸುಧಾರಣೆ. ಆಪ್ತರಿಗಿಂತ ಪರಕೀಯರಲ್ಲಿ ಹೆಚ್ಚು ಸಹಾನುಭೂತಿ. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಅನುಕೂಲ. ಮೃಗಾದ ೪ ನೇ ಮತ್ತು ಆರಿದ್ರಾದ ಮೊದಲನೆ ೩ ಚರಣಗಳಿಗೆ ತೊಂದರೆ ಹೆಚ್ಚು. ತಾ. ೧೬, ೧೭, ೨೦ ಅನುಕೂಲ.

## ಕರ್ಕ

ಪ್ರಕೃತಿ ಉತ್ತಮ. ಪ್ರಾಪಂಚಿಕಸುಖವೂ ಮನಸಿನಂತೆ. ಆದರೆ ಮಿತ್ರರು ಮತ್ತು ಮಕ್ಕಳು ಅಪ್ರಿಯಮಾತುಗಳ ಬಗ್ಗೆ ಅಗ್ರಹ ತಾಳುವರು. ಉದ್ಯೋಗದಲ್ಲಿ ಪ್ರಗತಿ ಕಡಮೆ. ಆದರೆ ಪ್ರತಿಷ್ಠೆ ಮತ್ತು ಲಾಭ ಅನುಕೂಲ ಏನೇನೋ ಕುತರ್ಕ ಮಾಡಿಕೊಂಡು ಮಾನಸಿಕ ತೊಂದರೆಗೊಳಗಾಗುವದು. ವಾದದಲ್ಲಿಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು. ಆದರೆ ನಿಮ್ಮನ್ನು ಕೆಡಹುವ ಸಲುವಾಗಿ ಶತ್ರುಗಳು ಬೇಕಾಯದೇಶೀರ ರೀತಿಯಿಂದಪ್ರಯತ್ನಿಸುವರು. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಅನುಕೂಲ. ಪುಷ್ಯದ ೪ ನೆ ಮತ್ತು ಆಶ್ಲೇಷಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೧೮, ೧೯, ೨೦ ಅನುಕೂಲ.

## ಸಿಂಹ

ಪ್ರಕೃತಿ ಅನುಕೂಲ. ಆದರೆ ಹೆಂಡತಿ ಆಯಾ ಕೆಲಸಗಳಲ್ಲಿ ವಿರೋಧ ಮಾಡುವಳು. ಮತ್ತು ರೇಗಿಗೇಳುವಂಥ ಕಟು ಭಾಷಣ ಮಾಡುವಳು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಅತ್ಯಂತ ಉತ್ತಮ ಆದರೆ ವೆಚ್ಚವೂ ಅದೇ ಪ್ರಮಾಣದಲ್ಲಿ ವರಿಷ್ಠರು ಇಲ್ಲವೆ ಆಶ್ರಯದಾತರು ತಂಟೆ ಹೂಡುವರು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಡುವದು. ಪ್ರವಾಸಾದಿ ಕೆಲಸ ಬಹಳ ಉತ್ತಮ. ಮಘಾದ ೪ ನೆ ಮತ್ತು ಪೂರ್ವಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೧೪, ೧೫, ೧೬, ೧೭ ಅನುಕೂಲ.

## ಕನ್ಯಾ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ. ಪ್ರಿಯಜನರಸಹವಾಸ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವೂ ಉತ್ತಮ. ಕೆಲ ಶುಭ ಸಂಗತಿಗಳು. ಮಿತ್ರ ಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳ ಸಮಾನ ಸ್ಥಿತಿ. ಪ್ರವಾಸಾದಿ ಕೆಲಸ ಹಿತದ್ದು. ಉತ್ತರಾದ ೪ನೇ ಮತ್ತು ಹಸ್ತಾದ ಮೊದಲನೆ ೩ ಚರಣಗಳಿಗೆ ಮಾತ್ರ ತೊಂದರೆಯಿಂದಲೆ ಯಶಸ್ಸು. ತಾ. ೧೪, ೧೫, ೧೬, ೧೭ ಅನುಕೂಲ.

## ತುಲಾ

ಎಲ್ಲರ ಪ್ರಕೃತಿ ಉತ್ತಮ ಮತ್ತು ಸ್ವಲ್ಪ ಮತಭೇದ ಕಂಡುಬಂದರೂ ಒಟ್ಟಾರೆ ಪ್ರಾಪಂಚಿಕ ಸುಖ ಅನುಕೂಲ. ಕ್ಷುಲ್ಲಕ ಕಾರಣಗಳಿಗಾಗಿ ತಿಕ್ಕಾಟವುಂಟಾಗುವ ಸಂಭವ. ಇತರ ವ್ಯವಹಾರದಲ್ಲಿ ಪತ್ತು ಮತ್ತು ಪ್ರತಿಷ್ಠೆ ಉತ್ತಮ. ಲಾಭ ಅಂದಾಜಿನಷ್ಟೆ. ಆದರೆ ವೆಚ್ಚ ಹೆಚ್ಚು. ಪ್ರತಿಯೊಂದು ಕೆಲಸದಲ್ಲಿ ಮೊದಲು ತೊಂದರೆಯಾದರೂ ಕೊನೆಯಲ್ಲಿ ಮನಸಿನಂತೆ ಯಶಸ್ಸು. ಮಿತ್ರರು ಒಳ್ಳೆ ಶಿಕ್ಷಣ ಕೊಡುವರು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲತೆ! ಆಸ್ತಿಯಲ್ಲಿ ಹೆಚ್ಚಳ. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಚಿತ್ರಾದ ೪ನೆ ಮತ್ತು ಸ್ವಾತಿಯ ಮೊದಲನೆ ೩ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೧೬, ೧೭, ೨೦ ಅನುಕೂಲ.

## ವೃಶ್ಚಿಕ

ನಿಮ್ಮ ಪ್ರಕೃತಿಯಲ್ಲಿ ಕುರಕುರಿ ಆದರೆ ಹೆಂಡತಿಯದು ಅನುಕೂಲ. ಆದರೆ ಅವಳು ಮತ್ತು ಮಕ್ಕಳು ನಿಮ್ಮ ಮತದ ತೀರ ವಿರುದ್ಧ ವರ್ತನೆ ಮಾಡುವವರಿಂದ ಬಹಳ ದೊಡ್ಡ ಮನಸ್ತಾಪ. ಉಳಿದ ವಿಷಯಗಳಲ್ಲಿಯೂ ಪ್ರಾಪಂಚಿಕ ತೊಂದರೆ ಇದ್ದದ್ದೇ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆಯು ಮಾನದಿಂದ ಲಾಭ ಕಡಮೆ ಮತ್ತು ವೆಚ್ಚ ವಿಪರೀತ. ಕೆಲ ಪಾರಮಾರ್ಥಿಕ ಇಲ್ಲವೆ ಪರೋಪಕಾರದ ಕೃತ್ಯದಲ್ಲಿಯೂ ಹಣ ವೆಚ್ಚ ಮಾಡಲಾಗುವದು. ಜೇಷ್ಟ ಕುಜೇಷ್ಟೆಯ ಪರಿಣಾಮ ಮಿತ್ರರ ಮನಸಿನಲ್ಲಿ ವಿಪರೀತವಾಗುವದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳ ಸಮಾನ ಸ್ಥಿತಿ. ಪ್ರವಾಸ ಮತ್ತು ಪತ್ರವ್ಯವಹಾರಕ್ಕಿಂತ ಭೆಟ್ಟಿ ಅನುಕೂಲ. ಅನುರಾಧೆಯ ೪ ನೆ ಮತ್ತು ಜೇಷ್ಠಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೧೪, ೧೯, ೨೦ ಅನುಕೂಲ.

## ಧನು

ನಿಮ್ಮ ಮತ್ತು ಹೆಂಡತಿಯ ಪ್ರಕೃತಿ ಉತ್ತಮ. ಮತ್ತು ಬಹುಶಃ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಅನುಕೂಲ. ಆದರೂ ಪರಸ್ತ್ರೀಯ ಧ್ಯಾಸ ಬಹಳ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮವೆ. ಆದರೆ ವೆಚ್ಚವೂ ಪ್ರಮಾಣಮೀರಿ. ಎರಡನೆಯವರ ಬಗ್ಗೆ ಬಹಳ ಮತ್ಸರ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು. ಪ್ರವಾಸಾದಿ ಕೆಲಸ ಹಿತದ್ದು. ಮೂಲಾದ ೪ ನೆ ಮತ್ತು ಪೂರ್ವಾಷಾಢಾದ ಮೊದಲನೆ ೩ ಚರಣಗಳಿಗೆ ಹೆಚ್ಚು ತೊಂದರೆ. ತಾ. ೧೬, ೧೭, ೨೦ ಅನುಕೂಲ.

## ಮಕರ

ನಿಮ್ಮ ಮತ್ತು ಹೆಂಡತಿಯ ಪ್ರಕೃತಿ ಅನುಕೂಲ. ಆದರೆ ಮಕ್ಕಳಿಗೆ ಸ್ವಲ್ಪ ಕ್ಲೇಶ. ಎಲ್ಲ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಸಾಮಾನ್ಯ. ಆದರೆ ಸ್ಥಾವರದಲ್ಲಿ ಅನುಕೂಲ ಘಟನೆಗಳು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ವಿವಿಧ ವಸ್ತುಗಳ ಸಂಗ್ರಹ, ಮಿತ್ರ ಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲತೆ. ಪ್ರವಾಸಾದಿ ಕೆಲಸ ಹಿತದ್ದು. ಉತ್ತರಾಷಾಢಾದ ೪ ನೆ ಮತ್ತು ಶ್ರವಣಾದ ಮೊದಲನೆ ೩ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೧೪, ೧೫, ೧೯ ಅನುಕೂಲ.

## ಕುಂಭ

ನಿಮ್ಮ ಮತ್ತು ಹೆಂಡತಿಯ ಪ್ರಕೃತಿಯಲ್ಲಿ ಕುರಕುರಿ ಇದ್ದದ್ದೇ. ಪ್ರಾಪಂಚಿಕ ಸುಖ ಸಾಧಾರಣವೆ. ಆದರೆ ಮಕ್ಕಳಲ್ಲಿ ಉನ್ನತಿ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಮನಸಿನಂತೆ. ಆದರೆ ಖಾತ್ರಿಯದ್ದ ಸಂಗತಿಗಳಲ್ಲಿಯೂ ಆತ್ಮವಿಶ್ವಾಸ ಡಳಮಳಿಸುತ್ತ ಹೋಗುವದರಿಂದ ಸಹಾಯಕರ್ತರ ಮನಸ್ಸು ಚಲವಿಚಲವಾಗುವದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ. ಮಿತ್ರ ಸುಖ ಉತ್ತಮ. ಪ್ರವಾಸಾದಿ ಕೆಲಸ ಅನುಕೂಲ. ಧನಿಷ್ಠಾದ ೪ ನೆ ಮತ್ತು ಶತತಾರಿಕೆಯ ಮೊದಲನೆ ೩ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೧೬, ೧೭, ೨೦ ಅನುಕೂಲ.

## ಮೀನ

ನಿಮ್ಮ ಮತ್ತು ಹೆಂಡತಿಯ ಪ್ರಕೃತಿ ಕೆಟ್ಟದ್ದು. ಪ್ರಾಪಂಚಿಕ ಸುಖ ಸಾಧಾರಣವೆ. ಮಕ್ಕಳಲ್ಲಿ ಸ್ವಲ್ಪ ಉನ್ನತಿ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಸಾಮಾನ್ಯ ಆದರೆ ಲಾಭ ಉತ್ತಮ. ಅವಚಿತ ಲಾಭದ ಸಂಭವ. ಮಿತ್ರ ಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಸಮಾನ ಸ್ಥಿತಿ. ಪ್ರವಾಸಾದಿ ಕೆಲಸ ತೊಂದರೆಯದು. ಉತ್ತರಾಭಾದ್ರಪದದ ೪ ನೆ ಮತ್ತು ರೇವತಿಯ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೧೫, ೧೮, ೧೯ ಅನುಕೂಲ.

---

# ಕಾಂಗ್ರೆಸ್ ಸಂಘಟನೆಯಲ್ಲಿಯ ಕೆಲ ದೋಷಗಳು

(೧ನೇ ಪುಟದಿಂದ)

ವಾಗಿಯೂ ಉಳಿಸಬೇಕಾದರೆ ಅದೊಂದೇ ಉಪಾಯವೆಂದು ನಾನು ಸಾಧಿಸುತ್ತೇನೆ. ಕಳೆದ ೨೫ ವರ್ಷಗಳ ಕಾಂಗ್ರೆಸ್ ಅಹಿಂಸೆಯ ಇತಿಹಾಸದಿಂದ ಇಷ್ಟನ್ನು ನಾವು ಅರಿತು ಕೊಳ್ಳದಿದ್ದರೆ ಅದರಲ್ಲಿ ಅರಿಯತಕ್ಕದ್ದೇನೂ ಇರುವದಿಲ್ಲ.

ಪ್ರಶ್ನೆ :— ಕಾಂಗ್ರೆಸ್ಸನ್ನು ಎದುರಾ ಎದುರು ವಿರೋಧಿಸುತ್ತಿರುವ ಕಮ್ಯುನಿಸ್ಟರ ಚಟುವಟಿಕೆಗಳನ್ನು ಹೇಗೆ ನಿವಾರಿಸಬೇಕು ?

ಉತ್ತರ :- ಹಿಂದೂಮುಸ್ಲಿಂ ಪ್ರಶ್ನೆಗಾಗಿ ನಾನು ಹೇಳಿದ ತತ್ವವೇ ಕಮ್ಯುನಿಸ್ಟರ ಸಂಬಂಧದಲ್ಲಿಯೂ ಅನ್ವಯಿಸುವದು. "ಮುಸ್ಲಿಮರು" ಎನ್ನುವಾಗ ಮುಸ್ಲಿಂಲೀಗೆಂದು ನನ್ನ ಅರ್ಥ. ಏಕೆಂದರೆ ಎಲ್ಲ ಮುಸ್ಲಿಮರೂ ಮುಸ್ಲಿಂ ಲೀಗಿನಲ್ಲಿಲ್ಲ. ಹತ್ತು ಕೋಟಿ ಹಿಂದೀ ಮುಸ್ಲಿಮರು ಪ್ರತ್ಯೇಕ ರಾಜ್ಯವನ್ನು ಸ್ಥಾಪಿಸಿ ಕೊಳ್ಳದೆ ಹೋದರೆ, ಅವರು ಮುಳುಗಿ ಹೋಗುವದು ಅಥವಾ ಕೊಚ್ಚಿಕೊಂಡು ಹೋಗುವದು ಖಂಡಿತವೆಂದು ಮುಸ್ಲಿಂ ಲೀಗಿನವರು ಹುಯಿಲೆಬ್ಬಿಸಿದ್ದಾರೆ. ಈ ಹೂಲಿ ಶುದ್ಧ ಭಯಪ್ರಸಾರಕ ವ್ಯರ್ಥಾಲಾಪವೆಂದು ನಾನು ಹೇಳುವೆ. ಹಿಂದುಸ್ತಾನದ ಮುಸ್ಲಿಮರಂತೆ ಜನಸಂಖ್ಯೆಯಲ್ಲಿ ಕಾಲಂಶದಷ್ಟಿರುವ ಜನಾಂಗವನ್ನು ಶಾಶ್ವತವಾಗಿ ಮೆಟ್ಟಿಬಿಡುವದು ಯಾವುದೇ ದೇಶಕ್ಕೆ ಸಾಧ್ಯವಿದೆಯೆಂದು ತಿಳಿಯುವದು ಶುದ್ಧ ತಿಳಿಗೇಡಿತನ. ಆದರೂ ಪಾಕಿಸ್ತಾನ ನ್ಯಾಯ್ಯವಾದ ಬೇಡಿಕೆಯೆಂದಾಗಲಿ ಅದರಿಂದ ಇಸ್ಲಾಮಕ್ಕೆ ಹಿತವಾಗುವದೆಂದಾಗಲಿ ಮನವರಿಕೆಯಾದರೆ ಅದನ್ನು ಕೊಟ್ಟುಬಿಡಲು ನಾನು ಸಿದ್ಧನೆ. ಆದರೆ ಮುಸ್ಲಿಂ ಲೀಗು ಮುಂದೊಡ್ಡಿದ ಸ್ವರೂಪದಲ್ಲಿ ಪಾಕಿಸ್ತಾನದ ಬೇಡಿಕೆ ಇಸ್ಲಾಮ ವಿರುದ್ಧವಾಗಿದೆಯೆಂದು ನನಗೆ ಖಚಿತವಾಗಿದೆ. ಅದನ್ನು ಪಾಪಕರವೆಂದು ಕರೆಯಲು ನಾನು ಹಿಂದೆಮುಂದೆ ನೋಡಿಲ್ಲ. ಇಸ್ಲಾಮು ಮಾನವಕುಲದ ಐಕ್ಯ,ಬಾಂಧವ್ಯಗಳನ್ನು ಬೋಧಿಸುತ್ತದೆ ಹೊರತು ಮಾನವಸಂತತಿಯ ಏಕತ್ವವನ್ನು ಭಂಗಪಡಿಸಲು ಹೇಳುವದಿಲ್ಲ. ಆದುದರಿಂದ ಹಿಂದುಸ್ತಾನವನ್ನು ಸಂಭವತಃ ಪರಸ್ಪರ ಹಗೆತನದ ಗುಂಪುಗಳಾಗಿ ತುಂಡರಿಸಬೇಕೆನ್ನುವವರು ಹಿಂದುಸ್ತಾನಕ್ಕೂ ಇಸ್ಲಾಮಿಗೂ ಸೇರಿಯೆ ವೈರಿಗಳು. ಅವರು ಬೇಕಾದರೆ ನನ್ನನ್ನು ಕಡಿದು ಹೋಳುಹೋಳು ಮಾಡಲಿ, ನನಗೆ ತಪ್ಪೆಂದು ತೋರುವ ಸಂಗತಿಗೆ ಒಪ್ಪಿಗೆ ಕೊಡುವಂತೆ ಮಾಡಲಾರರು.

ಕಮ್ಯುನಿಸ್ಟರ ಪ್ರಶ್ನೆಯು ನೆಲೆ ಇದಕ್ಕಿಂತ ತುಸು ಭಿನ್ನವಾಗಿದೆ. ಅವರು ಉಪದ್ರವಕಾರಕತೆಯನ್ನೇ ತಮ್ಮ ಉದ್ಯೋಗವಾಗಿ ಮಾಡಿಕೊಂಡಂತಿದೆ. ಅವರಲ್ಲಿ ಕೆಲವರು ನನ್ನ ಗೆಳೆಯರಾಗಿದ್ದಾರೆ. ಇನ್ನು ಕೆಲವರು ನನ್ನ ಮಕ್ಕಳಂತಿದ್ದಾರೆ. ಆದರೆ ಅವರು ನ್ಯಾಯಾನ್ಯಾಯ ಸತ್ಯಾಸತ್ಯಗಳಲ್ಲಿ ಯಾವ ಭೇದವನ್ನೂ ಮಾಡುವಂತೆ ತೋರುವದಿಲ್ಲ. ಈ ಆರೋಪವನ್ನು ಅವರು ಅಲ್ಲಗಳೆಯುತ್ತಾರೆ. ಆದರೆ ಅವರ ಕೃತ್ಯಗಳ ವರದಿಗಳು ಅದನ್ನು ಸಮರ್ಥಿಸುವಂತೆ ಕಾಣುವವು. ಇದಲ್ಲದೆ ಅವರು ರಶಿಯಾದಿಂದ ನಿರ್ದೇಶಗಳನ್ನು ಪಡೆಯುವಂತಿದೆ. ಆ ದೇಶವನ್ನು ಹಿಂದುಸ್ತಾನಕ್ಕಿಂತಲೂ ಮಿಗಿಲಾಗಿ ತಮ್ಮ ಆಧ್ಯಾತ್ಮಿಕ ಮಾತೃಭೂಮಿಯೆಂದು ಅವರು ಬಗೆಯುತ್ತಾರೆ. ಹೊರಗಿನ ರಾಷ್ಟ್ರವೊಂದರ ಅಧೀನತೆಗೆ ನಾನು ಬೆಂಬಲಕೊಡಲಾರೆ. ಸದ್ಯದ ಆಹಾರ ಕೊರತೆಯ ಕಾಲದಲ್ಲಿ ನಾವು ರಶಿಯಾದ ಗೋದಿಯನ್ನು ಕೂಡ ಅವಲಂಬಿಸಬಾರದೆಂದು ಹೇಳಿದ್ದೇನೆ. ಹೊರನಾಡುಗಳ ದಾನಬುದ್ಧಿಯನ್ನು ಅವಲಂಬಿಸುವದಕ್ಕಿಂತ ನಮ್ಮ ನೆಲ ನೀಡಬಹುದಾದುದರಿಂದಲೆ ಸಾಗಿಸಿಕೊಂಡು ಹೋಗುವ ಸಾಮರ್ಥ್ಯವೂ ಧೈರ್ಯವೂ ನಮಗಿರಬೇಕು. ಇಲ್ಲದಿದ್ದರೆ ನಾವು ಸ್ವತಂತ್ರ ದೇಶವಾಗಿ ಉಳಿಯಲು ಅಯೋಗ್ಯರಾಗುವೆವು. ವಿದೇಶಿ ತತ್ವಸಿದ್ಧಾಂತಗಳಿಗೂ ಇದೇ ಮಾತು ಅನ್ವಯಿಸುತ್ತದೆ. ಎಷ್ಟು ಮಟ್ಟಿಗೆ ಅವುಗಳನ್ನು ಅರಗಿಸಿಕೊಂಡು ಹಿಂದೀ ಸ್ಥಿತಿಗತಿಗೆ ಹೊಂದಿಸಿಕೊಳ್ಳಬಹುದೊ ಅಷ್ಟು ಮಟ್ಟಿಗೆ ಮಾತ್ರ ನಾನು ಅವುಗಳನ್ನು ಸ್ವೀಕರಿಸೇನು. ಆದರೆ ಅವುಗಳ ಆಳಿಯಾಳಾಗಲು ನಾನು ಒಪ್ಪಲಾರೆ.

ಆದುದರಿಂದ ಕಮ್ಯುನಿಸ್ಟರ ಬಗೆಗೆ ನನ್ನ ಸೂತ್ರವೆಂದರೆ ಅವರ ಕೈಯಲ್ಲಿ ನಾನು ಸತ್ತೇನು ಹೊರತು ಅವರಿಗೆ ಪ್ರತೀಕಾರ ಮಾಡಲಿಕ್ಕಿಲ್ಲ, ಎಂಬುದು.

ಹೊಸದಿಲ್ಲಿ ೩೦-೯-೪೬ ಪ್ಯಾರೇಲಾಲ



ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿತ ಪ್ರಕಟವಾಯಿತು